ಭವಭಯ ಹಾರಿಣಿ ಪಾಪ ವಿಮೋಚನಿ । ಸಾಧುಜನಾಶ್ರಿತ ಪಾದಯುತೇ।
ಜಯ ಜಯಹೇ ಮಧುಸೂದನ ಕಾಮಿನಿ । ಧೈರ್ಯಲಕ್ಷ್ಮಿ ಸದಾ ಪಾಲಯ ಮಾಂ॥

ಜಯ ಜಯ ದುರ್ಗತಿ ನಾಶಿನಿ ಕಾಮಿನಿ । ಸರ್ವಫಲಪ್ರದ ಶಾಸ್ತ್ರನುತೇ ।
ರಥಗಜ ತುರಗ ಪದಾತಿ ಸಮಾವೃತ । ಪರಿಜನ ಮಂಡಿತ ಲೋಕನುತೇ ।
ಹರಿಹರ ಬ್ರಹ್ಮಸುಪೂಜಿತ ಸೇವಿತ । ತಾಪನಿವಾರಿಣಿ ಪಾದಯುತೇ ।
ಜಯ ಜಯಹೇ ಮಧುಸೂದನ ಕಾಮಿನಿ । ಗಜಲಕ್ಷ್ಮಿ ರೂಪಿಣಿ ಪಾಲಯ ಮಾಂ ॥

ಆಯಿ ಗಜ ವಾಹಿನಿ ಮೋಹಿನಿ ಚಕ್ರಿಣಿ । ರಾಗವಿವರ್ಧಿನಿ ಜ್ಞಾನಮಯೇ ।
ಗುಣ ಗಣ ವಾರಿಧಿ ಲೋಕ ಹಿತೈಷಿಣಿ । ಸ್ವರಶಬ್ದ ಭೂಷಿಣಿ ಗಾನನುತೇ ।
ಸಕಲ ಸುರಾಸುರ ದೈವ ಮುನೀಶ್ವರ । ಮಾನವ ವಂದಿತ ಪಾದಯುತೇ ।
ಜಯ ಜಯಹೇ ಮಧುಸೂದನ ಕಾಮಿನಿ । ಸಂತಾನ ಲಕ್ಷ್ಮಿ ಪಾಲಯ ಮಾಂ ॥

ಜಯಕಮಲಾಸಿನಿ ಸದ್ಗತಿದಾಯಿನಿ । ಜ್ಞಾನವಿಕಾಸಿನಿ ಗಾನಮಯೇ ।
ಅನುದಿನಮರ್ಚಿತ ಕುಂಕುಮ ನೂಪುರ । ಭೂಷಿತ ವಾಸಿತ ವಾದ್ಯನುತೇ ।

ಕನಕಧಾರಾಸ್ತುತಿ ವೈಭವ ವಂದಿತ । ಶಂಕರ ದೇಶಿಕ ಮಾನ್ಯಪತೇ ।
ಜಯ ಜಯಹೇ ಮಧುಸೂದನ ಕಾಮಿನಿ । ವಿಜಯಲಕ್ಷ್ಮಿ ಸದಾ ಪಾಲಯ ಮಾಂ ॥

ಪ್ರಣತ ಸುರೇಶ್ವರಿ ಭಾರತಿ ಭಾರ್ಗವಿ । ಶೋಕವಿನಾಶಿನಿ ರತ್ನಮಯೇ ।
ಮಣಿಮಯ ಭೂಷಿತ ಕರ್ಣ ವಿಭೂಷಿಣಿ । ಶಾಂತಿ ಸಮಾವೃತ ಹಾಸ್ಯಮುಖೇ ।
ನವನಿಧಿದಾಯಿನಿ ಕಲಿಮಲ ಹಾರಿಣಿ । ಕಾಮಿತ ಫಲಪ್ರದ ಹಸ್ತಯುತೇ ।
ಜಯ ಜಯಹೇ ಮಧುಸೂದನ ಕಾಮಿನಿ। ವಿದ್ಯಾಲಕ್ಷ್ಮಿ ಸದಾ ಪಾಲಯ ಮಾಂ ॥

ಧಿಮಿಧಿಮಿ ಧಿಂಧಿಮಿ ಧಿಂಧಿಮಿ ಧಿಂಧಿಮಿ । ದುಂದುಭಿನಾದ ಸುಪೂರ್ಣಮಯೇ ।
ಘಮಘಮ ಘುಂಘುಮ ಘುಂಘುಮ ಘುಂಘುಮ । ಶಂಖನಿನಾದ ಸುವಾದ್ಯನುತೇ ।
ವೇದಪುರಾಣೇತಿಹಾಸಸುಪೂಜಿತೇ । ವೈದಿಕ ಮಾರ್ಗ ಪ್ರದರ್ಶಯುತೇ ।
ಜಯ ಜಯಹೇ ಮಧುಸೂದನ ಕಾಮಿನಿ । ಧನಲಕ್ಷ್ಮಿ ರೂಪಿಣಿ ಪಾಲಯ ಮಾಂ ॥

ಓಂ ನಮೋ ನಾರಾಯಣ। ಓಂ ನಮೋ ನಾರಾಯಣ । ಓಂ ನಮೋ ನಾರಾಯಣ।

# ಶ್ರೀ ಲಕ್ಷ್ಮೀ ಸ್ತೋತ್ರ

ನಮಸ್ತೇಽಸ್ತು ಮಹಾಮಾಯೇ । ಶ್ರೀಪೀಠೇ ಸುರಪೂಜಿತೇ ॥
ಶಂಖಚಕ್ರ ಗದಾಹಸ್ತೇ । ಮಹಾಲಕ್ಷ್ಮೀ ನಮೋಸ್ತುತೇ ॥ ॥೧॥

ನಮಸ್ತೇ ಗರುಡಾರೂಢೇ ಕೋಲಾಸುರ ಭಯಂಕರೀ ।
ಸರ್ವಪಾಪ ಹರೇದೇವಿ । ಮಹಾಲಕ್ಷ್ಮೀನಮೋಸ್ತುತೇ ॥ ॥೨॥

ಸರ್ವಜ್ಞೇ ಸರ್ವವರದೇ ಸರ್ವದುಷ್ಟ ಭಯಂಕರೀ ।
ಸರ್ವದುಃಖ ಹರೇದೇವಿ । ಮಹಾಲಕ್ಷ್ಮೀ ನಮೋಸ್ತುತೇ ॥ ॥೩॥

ಸಿದ್ಧಿ ಬುದ್ಧಿ ಪ್ರದೇ ದೇವಿ ಭುಕ್ತಿಮುಕ್ತಿಪ್ರದಾಯಿನೀ ।
ಮಂತ್ರ ಮೂರ್ತೇ ಸದಾದೇವಿ । ಮಹಾಲಕ್ಷ್ಮೀನಮೋಸ್ತುತೇ ॥ ॥೪॥

ಆದ್ಯಂತರಹಿತೇದೇವಿ ಆದ್ಯಶಕ್ತಿ ಮಹೇಶ್ವರೀ ।
ಯೋಗಾಗ್ನೇ ಯೋಗಸಂಭೂತೇ । ಮಹಾಲಕ್ಷ್ಮೀ ನಮೋಸ್ತುತೇ ॥ ॥೫॥

ಸ್ಥೂಲಸೂಕ್ಷ್ಮೇ ಮಹಾರೌದ್ರೇ ಮಹಾಶಕ್ತೇ ಮಹೋದರೇ ।
ಮಹಾಪಾಪ ಹರೇ ದೇವಿ। ಮಹಾಲಕ್ಷ್ಮೀರ್ನಮೋಸ್ತುತೇ ॥ ॥೬॥

ಪದ್ಮಾಸನಸ್ಥಿತೇದೇವಿ ಪರಬ್ರಹ್ಮಸ್ವರೂಪಿಣೀ ।
ಪರಮೇಶಿ ಜಗನ್ಮಾತೇ ಮಹಾಲಕ್ಷ್ಮೀರ್ನಮೋಸ್ತುತೇ ॥ ॥೭॥

ಶ್ವೇತಾಂಬರಧರೇದೇವಿ ನಾನಾಲಂಕಾರ ಭೂಷಿತೇ ।
ಜಗಸ್ಥಿತೇ ಜಗನ್ಮಾತಾ। ಮಹಾಲಕ್ಷ್ಮೀರ್ನಮೋಸ್ತುತೇ ॥ ॥೮॥

ಮಹಾಲಕ್ಷ್ಮ್ಯಷ್ಟಕ ಸ್ತೋತ್ರಂ ಯಃ ಪಠೇದ್ಭಕ್ತಿ ಮಾನ್ನರಃ ।
ಸರ್ವಸಿದ್ಧಿ ಮವಾಪ್ನೋತಿ ರಾಜ್ಯಂ ಪ್ರಾಪ್ನೋತಿ ಸರ್ವದ ॥ ॥೯॥

ಏಕಕಾಲಂ ಪಠೇನ್ನಿತ್ಯಂ ಮಹಾಪಾಪವಿನಾಶನಂ ।
ದ್ವಿಕಾಲಂ ಯಃಪಠೇನ್ನಿತ್ಯಂ ಧನಧಾನ್ಯ ಸಮನ್ವಿತಃ ॥ ॥೧೦॥

ತ್ರಿಕಾಲಂ ಯಃಪಠೇನ್ನಿತ್ಯಂ ಮಹಾ ಶತ್ರುವಿನಾಶನಂ ।
ಮಹಾಲಕ್ಷ್ಮೀರ್ಭವೇನ್ನಿತ್ಯಂ ಪ್ರಸನ್ನ ವರದಾಶುಭಾ ॥ ॥೧೧॥

ಇತಿ ಇಂದ್ರಕೃತಂ ಶ್ರೀ ಮಹಾಲಕ್ಷ್ಮ್ಯಷ್ಟಕಂ ಸಂಪೂರ್ಣಂ

# ರಾಮ-ಕೃಷ್ಣ ಭಜನೆ

ರಾಮಚಂದ್ರ ರಾಘವೇಂದ್ರ ಜಾನಕೀ ಪತೇ ।
ಕೃಷ್ಣ ಚಂದ್ರ ಯಾದವೇಂದ್ರ ರುಕ್ಮಿಣೀ ಪತೇ ॥
ರಾಜ ರಾಜ ಅನುಜ ಪೂಜ್ಯ ಜಾನಕೀ ಪತೇ ।
ರಾಜ ರಾಜ ಅನುಜ ಪೂಜ್ಯ ರುಕ್ಮಿಣೀ ಪತೇ ॥
ಸುಂದರಾಂಗ ಮಾತ್ರುಪಾಂಗ ಜಾನಕೀ ಪತೇ ।
ರಾಗರಂಗ ಖರರತಾಂಗ ರುಕ್ಮಿಣೀ ಪತೇ ॥
ಶೇಷಭ್ರಾತ ಅಶೇಷತಾತ ಜಾನಕೀ ಪತೇ ।
ಶೇಷಹತ ಪುತ್ರಧಾತ ರುಕ್ಮಿಣೀ ಪತೇ ॥
ಏಕಪತ್ನಿ ಲೋಕ ಕೀರ್ತಿ ಜಾನಕೀಪತೇ ।
ಅನೇಕ ಪತ್ನಿ ಮಹಾವಿರಕ್ತಿ ರುಕ್ಮಿಣೀ ಪತೇ ॥
ವಿಶ್ವರೂಪ ಆಶ್ವರೂಪ ಜಾನಕೀ ಪತೇ ।
ವಿಶ್ವರೂಪ ವಿಶ್ವನಾಥ ರುಕ್ಮಿಣೀ ಪತೇ ॥

ತುಳಸಿ ರಾಮ ಧಾರಿನಾಮ ಜಾನಕೀ ಪತೇ ।
ತುಳಸಿ ರಾಮ ಭರಿತ ಪ್ರೇಮ ರುಕ್ಮಿಣೀ ಪತೇ ॥
ಜಯತು ಜಯತು ಮಂತ್ರಂ ಜನ್ಮಸಾಫಲ್ಯ ಮಂತ್ರಂ ।
ಜನನ ಮರಣ ಭೇದಕ್ಲೇಶ ವಿಚ್ಛೇದ ಮಂತ್ರಂ ।
ಸಕಲ ನಿಗಮ ಮಂತ್ರಂ ಸರ್ವಶಾಸ್ತ್ರೈಕ ಮಂತ್ರಂ ।
ಪಶುಪತಿ ನಿಜಮಂತ್ರಂ ರಾಮ ರಾಮೇತಿ ಮಂತ್ರಂ ।
ಪಶುಪತಿ ನಿಜ ಮಂತ್ರಂ ಪಾತು ಮಾಂ ರಾಮ ಮಂತ್ರಂ ॥



# ನವಗ್ರಹ ಸ್ತೋತ್ರಂ

ಜಪಾ ಕುಸುಮ ಸಂಕಾಶಂ ಕಾಶ್ಯಪೇಯಂ ಮಹಾದ್ಯುತಿಂ ।
ತಮೋಽರಿಂ ಸರ್ವಪಾಪಘ್ನಂ ಪ್ರಣತೋಽಸ್ಮಿ ದಿವಾಕರಂ ॥೧॥

ದಧಿಶಂಖ ತುಷಾರಾಭಂ ಕ್ಷೀರೋದಾರ್ಣವ ಸಂಭವಂ ।
ನಮಾಮಿ ಶಶಿನಂ ಸೋಮಂ ಶಂಭೋರ್ಮುಕುಟ ಭೂಷಣಂ ॥೨॥

ಧರಣೀ ಗರ್ಭಸಂಭೂತಂ ವಿದ್ಯುತ್ಕಾಂತಿ ಸಮಪ್ರಭಂ ।
ಕುಮಾರಂ ಶಕ್ತಿಹಸ್ತಂ ಚ ಮಂಗಳಂ ಪ್ರಣಮಾಮ್ಯಹಂ ॥೩॥

ಪ್ರಿಯಂಗು ಕಲಿಕಾಶ್ಯಾಮಂ ರೂಪೇಣಾಪ್ರತಿಮಂ ಬುಧಂ ।
ಸೌಮ್ಯಂ ಸೌಮ್ಯಗುಣೋಪೇತಂ ತಂ ಬುಧಂ ಪ್ರಣಮಾಮ್ಯಹಂ ॥೪॥

ದೇವಾನಾಂ ಚ ಋಷೀಣಾಂ ಚ ಗುರುಂ ಕಾಂಚನಸನ್ನಿಭಂ ।
ಬುದ್ಧಿಭೂತಂ ತ್ರಿಲೋಕೇಶಂ ತಂ ನಮಾಮಿ ಬೃಹಸ್ಪತಿಂ ॥೫॥

ಹಿಮಕುಂದಮೃಣಾಲಾಭಂ ದೈತ್ಯಾನಾಂ ಪರಮಂ ಗುರುಂ ।
ಸರ್ವಶಾಸ್ತ್ರ ಪ್ರವಕ್ತಾರಂ ಭಾರ್ಗವಂ ಪ್ರಣಮಾಮ್ಯಹಂ ॥೬॥

ನೀಲಾಂಜನ ಸಮಾಭಾಸಂ ರವಿಪುತ್ರಂ ಯಮಾಗ್ರಜಂ ।
ಛಾಯಾ ಮಾರ್ತಂಡ ಸಂಭೂತಂ ತಂ ನಮಾಮಿ ಶನೈಶ್ಚರಂ ॥೭॥

ಅರ್ಧಕಾಯಂ ಮಹಾವೀರ್ಯಂ ಚಂದ್ರಾದಿತ್ಯ ವಿಮರ್ದನಂ ।
ಸಿಂಹಿಕಾ ಗರ್ಭ ಸಂಭೂತಂ ತಂ ರಾಹುಂ ಪ್ರಣಮಾಮ್ಯಹಂ ॥೮॥

ಪಲಾಶಪುಷ್ಪ ಸಂಕಾಶಂ ತಾರಕಾಗ್ರಹಮಸ್ತಕಂ ।
ರೌದ್ರಂ ರೌದ್ರಾತ್ಮಕಂ ಘೋರಂ ತಂ ಕೇತುಂ ಪ್ರಣಮಾಮ್ಯಹಂ ॥೯॥

ಇತಿ ವ್ಯಾಸ ಮುಖೋದ್ಗೀತಂ ಯಃ ಪಠೇತ್ಸುಸಮಾಹಿತಃ
ದಿವಾ ವಾ ಯದಿ ವಾ ರಾತ್ರೌ ವಿಘ್ನಶಾಂತಿರ್ಭವಿಷ್ಯತಿ ॥೧೦॥

ನರ ನಾರೀ ನೃಪಾಣಾಂ ಚ ಭವೇದ್ದುಸ್ಸ್ವಪ್ನನಾಶನಂ ।
ಐಶ್ವರ್ಯಮತುಲಂ ತೇಷಾಮಾರೋಗ್ಯಂ ಪುಷ್ಟಿವರ್ಧನಂ । ॥೧೧॥

ಗ್ರಹ ನಕ್ಷತ್ರಜಾಃ ಪೀಡಾಸ್ತಸ್ಕರಾಗ್ನಿ ಸಮುದ್ಭವಾಃ।
ತಾಃ ಸರ್ವಾಃ ಪ್ರಶಮಂ ಯಾಂತಿ ವ್ಯಾಸೋ ಬ್ರೂತೇ ನ ಸಂಶಯಃ ॥೧೨॥

ನವಗ್ರಹ ಸ್ತೋತ್ರಂ ಸಮಾಪ್ತಂ

# ಪಾಂಡುರಂಗ

ಆಪದ್ಬಾಂಧವ ಪಾಂಡುರಂಗಾ
ಗೋಪೀವಲ್ಲಭ ಪಾಂಡುರಂಗಾ
ಜಗನ್ನಾಥ ವಿಠ್ಠಲ ಪಾಂಡುರಂಗಾ
ವಿಶ್ವೇಶ ವಿಠ್ಠಲ ಪಾಂಡುರಂಗಾ
ಪಂಡರಿನಾಥಾ ಪಾಂಡುರಂಗಾ
ಪುರಂದರ ವಿಠ್ಠಲ ಪಾಂಡುರಂಗಾ
ಪುಂಡರೀಕ ವರದ ಪಾಂಡುರಂಗಾ
ನರಹರಿ ವಿಠ್ಠಲ ಪಾಂಡುರಂಗಾ
ನಿರುಪಮ ವಿಠ್ಠಲ ಪಾಂಡುರಂಗಾ
ವಿರೂಪಾಕ್ಷ ವಿಠ್ಠಲ ಪಾಂಡುರಂಗಾ
ಹರಿಗುರು ವಿಠ್ಠಲಿ ಪಾಂಡುರಂಗಾ
ಜಯಗುರು ವಿಠ್ಠಲ ಪಾಂಡುರಂಗಾ

ಗೋಪೀವಲ್ಲಭ ಪಾಂಡುರಂಗಾ
ಜಗನ್ನಾಥವಿಠಲ ಪಾಂಡುರಂಗಾ
ವಿಶ್ವೇಶ ವಿಠ್ಠಲ ಪಾಂಡುರಂಗಾ
ಪಂಡರಿನಾಥಾ ಪಾಂಡುರಂಗಾ
ಪುರಂದರ ವಿಠ್ಠಲ ಪಾಂಡುರಂಗಾ
ಪುಂಡರೀಕ ವರದ ಪಾಂಡುರಂಗಾ
ನರಹರಿ ವಿಠ್ಠಲ ಪಾಂಡುರಂಗಾ
ನಿರುಪಮ ವಿಠ್ಠಲ ಪಾಂಡುರಂಗಾ
ವಿರೂಪಾಕ್ಷ ವಿಠ್ಠಲ ಪಾಂಡುರಂಗಾ
ಹರಿಗುರು ವಿಠ್ಠಲ ಪಾಂಡುರಂಗಾ
ಜಯಗುರು ವಿಠ್ಠಲ ಪಾಂಡುರಂಗಾ
ಜಯ ಜಯ ವಿಠ್ಠಲ ಪಾಂಡುರಂಗಾ

ಜಯ ಜಯ ವಿಠ್ಠಲ ಪಾಂಡುರಂಗಾ
ಜಯಹರಿ ವಿಠ್ಠಲ ಪಾಂಡುರಂಗಾ
ಭಕ್ತವತ್ಸಲ ಪಾಂಡುರಂಗಾ
ಮುಕ್ತಿದಾಯಕ ಪಾಂಡುರಂಗಾ
ರುಕುಮಾಯಿ ವಲ್ಲಭ ಪಾಂಡುರಂಗಾ
ಅನಾಥ ರಕ್ಷಕ ಪಾಂಡುರಂಗಾ
ಆಪದ್ಬಾಂಧವ ಪಾಂಡುರಂಗಾ
ಜೈ ಜೈ ವಿಠ್ಠಲ ಪಾಂಡುರಂಗಾ
ದೇವಕಿ ನಂದನ ಪಾಂಡುರಂಗಾ
ಗಾನವಿಲೋಲ ಪಾಂಡುರಂಗಾ
ಸುರಭಿನಿವಾಸ ಪಾಂಡುರಂಗಾ
ಭಕ್ತಪೋಷಕ ಪಾಂಡುರಂಗಾ
ಭಾನುಪ್ರಕಾಶ ಪಾಂಡುರಂಗಾ

ಜಯಹರಿ ವಿಠ್ಠಲ ಪಾಂಡುರಂಗಾ
ಭಕ್ತವತ್ಸಲ ಪಾಂಡುರಂಗಾ
ಮುಕ್ತಿದಾಯಕ ಪಾಂಡುರಂಗಾ
ರುಕುಮಾಯಿ ವಲ್ಲಭ ಪಾಂಡುರಂಗಾ
ಅನಾಥ ರಕ್ಷಕ ಪಾಂಡುರಂಗಾ
ಆಪದ್ಬಾಂಧವ ಪಾಂಡುರಂಗಾ
ಗೋಪೀವಲ್ಲಭ ಪಾಂಡುರಂಗಾ
ಜಯಹರಿ ವಿಠ್ಠಲ ಪಾಂಡುರಂಗಾ
ಪಾವನ ಚರಿತ ಪಾಂಡುರಂಗಾ
ಸುರಭಿನಿವಾಸ ಪಾಂಡುರಂಗಾ
ಭಕ್ತಪೋಷಕ ಪಾಂಡುರಂಗಾ
ಭಾನುಪ್ರಕಾಶ ಪಾಂಡುರಂಗಾ
ದಾತ್ರೀರಮಣ ಪಾಂಡುರಂಗಾ

ಶ್ರೀಕರಸೇವಿತ ಪಾಂಡುರಂಗಾ
ನರಕಂಠೀರವ ಪಾಂಡುರಂಗಾ
ವಾಮನ ವೇಷಾ ಪಾಂಡುರಂಗಾ
ಧರ್ಮ ಸ್ಥಾಪಕ ಪಾಂಡುರಂಗಾ
ಜೀವನಿಯಾಮಕ ಪಾಂಡುರಂಗಾ
ಲೋಕನಾಯಕ ಪಾಂಡುರಂಗಾ
ದೀನವತ್ಸಲ ಪಾಂಡುರಂಗಾ
ಕಷ್ಟವ ಬಿಡಿಸೋ ಪಾಂಡುರಂಗಾ
ಕಪಟನಾಟಕ ಪಾಂಡುರಂಗಾ
ಕರುಣಾಸಾಗರ ಪಾಂಡುರಂಗಾ
ಆಪದ್ಬಾಂಧವ ಪಾಂಡುರಂಗಾ
ಜೈ ಜೈ ವಿಠ್ಠಲ ಪಾಂಡುರಂಗಾ

ನರಕಂಠೀರವ ಪಾಂಡುರಂಗಾ
ವಾಮನ ವೇಷಾ ಪಾಂಡುರಂಗಾ
ಧರ್ಮ ಸ್ಥಾಪಕ ಪಾಂಡುರಂಗಾ
ಜೀವನಿಯಾಮಕ ಪಾಂಡುರಂಗಾ
ಲೋಕನಾಯಕ ಪಾಂಡುರಂಗಾ
ದೀನವತ್ಸಲ ಪಾಂಡುರಂಗಾ
ಕಷ್ಟವ ಬಿಡಿಸೋ ಪಾಂಡುರಂಗಾ
ಕಪಟನಾಟಕ ಪಾಂಡುರಂಗಾ
ಕರುಣಾಸಾಗರ ಪಾಂಡುರಂಗಾ
ಆಪದ್ಬಾಂಧವ ಪಾಂಡುರಂಗಾ
ಗೋಪೀವಲ್ಲಭ ಪಾಂಡುರಂಗಾ
ಜಯಹರಿ ವಿಠ್ಠಲ ಪಾಂಡುರಂಗಾ

---

# ಶ್ರೀ ಗಣೇಶ ಸ್ತೋತ್ರಂ

ಹರಪುತ್ರ ಸುರನಾಥ ಗಣೇಶ । ಗಿರಿರಾಜಸುತಾ ತನಯ ಗಣೇಶ ॥
ಗಜಮುಖ ಸುರವರ ದೇವ ಗಣೇಶ । ತ್ರಿಜಗಾಧಿಪ ಪದ ವಂದ್ಯಗಣೇಶ ॥
ಅಷ್ಟ ಸಿದ್ಧಿ ಗಳ ಈವ ಗಣೇಶ । ಕಷ್ಟದುಃಖ ಹರ ಮೂರ್ತಿ ಗಣೇಶ ॥
ವಿಘ್ನಹರನೆ ಪೊರೆ ಎಮ್ಮ ಗಣೇಶ । ಪ್ರಜ್ಞದಾತ ಶುಭ ಚರಿತ ಗಣೇಶ ॥
ಕರುಣಾ ಶರಧಿ ಪಾಹಿ ಗಣೇಶ । ಶರಣಾಗತ ರಕ್ಷಕ ನಮ್ಮ ಗಣೇಶ ॥
ಶುಭ್ರದಂತ ಶುಭನಾಮ ಗಣೇಶ । ಭಯವನು ಬಿಡಿಸು ಶಂಭು ಗಣೇಶ ॥
ಲಂಬೋದರ ಶುಭನಾಮ ಗಣೇಶ । ಪುತ್ರಪ್ರದಾಯಕ ದೇವ ಗಣೇಶ ॥
ಮೂಷಕವಾಹನ ಪಾಹಿ ಗಣೇಶ । ಶೇಷವಿಭೂಷಿತ ದೇವ ಗಣೇಶ ॥
ಮಂಗಳಾಂಗ ದೇವ ಗಣೇಶ । ಶಂಕರಸಹಿತ ಸುರವಂದ್ಯ ಗಣೇಶ ॥
ಶ್ವೇತ ವಸ್ತ್ರಧರ ಶ್ರೇಷ್ಠ ಗಣೇಶ । ಶ್ವೇತಯಶೋಪರಿಪೂರ್ಣ ಗಣೇಶ ॥
ಚಾರು ಚತುರ್ಭುಜರೂಪ ಗಣೇಶ । ಚಾರು ಮಂಗಳಹಾರ ಗಣೇಶ ॥
ವಿಕಟನಾಮ ವಿಮಲಾಂಗ ಗಣೇಶ । ಸಕಲಕಷ್ಟಹರ ದೇವ ಗಣೇಶ ॥

ಚಂದ್ರಚೂಡಸುತಪಾಹಿ ಗಣೇಶ । ಇಂದ್ರಾದ್ಯಮರ ಜಗವಂದ್ಯ ಗಣೇಶ ॥
ಲೋಕೇಶ ಗಣಾಧಿಪನೆ ಗಣೇಶ । ಶೋಕ ವಿನಾಶಕ ಪಾಹಿ ಗಣೇಶ ॥
ಪಾಶಾಂಕುಶಧರ ಪಾಹಿ ಗಣೇಶ । ಈಶಪಾಲದುರಿತಾರಿ ಗಣೇಶ ॥
ಷಣ್ಮುಖ ಜನಕನೆ ಪಾಹಿ ಗಣೇಶ । ಚಿನ್ಮಯರೂಪನೆ ಪಾಹಿ ಗಣೇಶ ॥
ಪ್ರಸನ್ನ ವದನನೆ ಪಾಹಿ ಗಣೇಶ । ಕುಸುಮಹಾರವನರ್ಪಿಸುವೆ ಗಣೇಶ ॥
ಮೋದಕಹರ ಶುಭಹಸ್ತ ಗಣೇಶ । ಮೇದಿನಿ ಪಾಲಕ ಪಾಹಿ ಗಣೇಶ ॥
ಹರಿಹರ ಪೂಜಿತ ಪಾದ ಗಣೇಶ । ನರೋತ್ತಮಾರ್ಚಿತ ಚರಿತ ಗಣೇಶ ॥
ವಂದಿಪೆನ್ನೈ ಸುರನಾಥ ಗಣೇಶ । ಮಂದಮತಿ ಹರಸೆಮ್ಮ ಗಣೇಶ ॥
ಪಾಹಿ ಪಾಹಿ ಹರಪುತ್ರ ಗಣೇಶ । ಪಾಹಿ ದೇವ ವರಮೂರ್ತಿ ಗಣೇಶ ॥
ಜಯಜಯ ಮಂಗಳರೂಪ ಗಣೇಶ । ಜಯಜಯ ಮಂಗಳ ಚರಿತ ಗಣೇಶ ॥

---

# ಶ್ರೀ ವೆಂಕಟೇಶ್ವರ ಸ್ತೋತ್ರಂ

ಬಾರೋ ವೆಂಕಟೇಶ ಮನೆಗೆ ಕರುಣದಿಂದ । ಬಾಚಿತಬ್ಬಿ ಮುದ್ದನಾಡುವೆ
ಅಂಬೆಗಾಲು ಮಂಡಿಹೂಡುತಾ । ಬಾಯಲಿದ್ದ ಅಮೃತವನ್ನೇ
ಜೊಲ್ಲುಸುರಿಸುತಾ । ತಾರಮ್ಯಯ್ಯ ದೂರಿನಾಡುತ ಅಪ್ಪೆ ತುಪ್ಪ ಚಪ್ಪರಿಸುತ್ತ
ಹತ್ತಿರಕ್ಕೆ ಬಾರೊ ಬಾರೊ ಹೆತ್ತ ಮಗನನೆಂದೆತ್ತಿಕೊಳುವೆ ॥೧॥

ಚಿನ್ನಿಕೋಲು ಚಂಡನಾಡುತಾ । ಗೆಳೆಯರೊಡನೆ ಗೊಲ್ಲನಾಗಿ
ಗೋವಕಾಯುತಾ । ಶಾಲುಪಟ್ಟೆ ನೆರಿಯನುಟ್ಟು
ತುಳಸಿಮಾಲೆ ಕೊರಳೊಳಿಟ್ಟು । ನಿಮ್ಮಪಾದ ಮುಂದಕಿಟ್ಟು ।
ಎನ್ನಮೇಲೆ ಚಿತ್ತವಿಟ್ಟು ॥ ॥೨॥

ವಿಾಸಲಾಗಿ ಮೊಸರ ಕಡೆಯುತಾ । ಕಡೆದಬೆಣ್ಣೆ ಕರೆದು ನಿನ್ನ
ಕರದೊಳಿಡುವೆನು । ನೋಡಿ ನಗುವೆ ನಿನ್ನ ಮುಖವ ಮರಳಿತಬ್ಬಿ
ಮುದ್ದನಾಡಿ ಸಂತೈಸಿ ನಿನ್ನನಾನು ಸೊಂಟತುಂಬ ಎತ್ತಿಕೊಳ್ಳುವೆ ॥ ॥೩॥

ಸಣ್ಣನಾಮ ಫಣೆಯೊಳು ಹೊಳೆಯುತಾ । ಶಂಖ ಚಕ್ರ ಪದ್ಮ ಕಿರೀಟ

ಹೊಳೆಯುತಾ । ವಾಮ ಭಾಗದಲ್ಲಿ ಲಕ್ಷ್ಮಿದೇವಿಯೊಡನೆ ಸರಸವಾಡುತ
ಅಮ್ಮ ಬಹಳ ಹಸಿದೆನೆಂದರೆ ಕೈಯ್ಯತುಂಬ ಹಣ್ಣು ಕೊಡುವೆ ॥ ॥೪॥

ಬಾಲನಿಲ್ಲದಬಂಜೆ ಎಂಬರೋ । ಎನ್ನ ಜನರು ಬಾಲಕರ ಪಡೆದ ಜಾಣರೋ ।
ಹಸುಳೆ ಇಲ್ಲದೆನಾನು ಬಹಳ ವ್ಯಸನದಿಂದ ಕಾಲಕಳೆದ । ಶಿಶುವಲೀಲೆ
ತೋರೊ ಬಾರೊ ಶೇಷಗಿರಿ ಶ್ರೀನಿವಾಸ ॥೫॥

.. .. ..

ಕಂಡೆ ಕಂಡೆ ಸ್ವಾಮಿಯ ಬೇಡಿಕೊಂಡೆ ಕಂಡೆ ತಿರುಪತಿ ವೆಂಕಟೇಶನ ।
ಕಾರಣಾತ್ಮಕ ಸಾರ್ವಭೌಮನ ಕಾಮಿತಾರ್ಥಗಳೀವ ದೇವನ ।
ಕರುಣನಿಧಿ ಎಂದೆನಿಸಿ ಮೆರೆವನ ಕಂಡೆ ಕಂಡೆ

ಕೋಟಿಸೂರ್ಯ ಪ್ರಕಾಶವೆನಿಪ । ಕಿರೀಟವನು ಮಸ್ತಕದಿ ಕಂಡೆನೋ ।
ನೋಟಕಾಶ್ಚರ್ಯವಾದೆನಗೆ ಮುಖನುಳಿನಲಿ ಶಿರೋಮಣಿಯ ಕಂಡೆನೋ ।
ಸಾಟಿ ಇಲ್ಲದ ಚತುರ ಹಸ್ತದಿ ಶಂಖುಚಕ್ರ ಗದಾಬ್ಜ ಕಂಡೆನೋ, ಬೂಟಕದ
ಮಾತಲ್ಲ ಕೇಳಿರೋ । ಭೂರಿದೈವದ ಗಂಡನಂಘ್ರಿಯ ॥ ॥೧॥

ತಪ್ಪುಕಾಣಿಕೆ ಕಪ್ಪಗಳನು । ಸಪ್ತದ್ವೀಪಗಳಿಂದ ತರಿಸಿದ । ಒಪ್ಪು ಓಗರಗಳನೆ

ಮಾಡಿಸಿ । ಉಚಿತದಿಂದಲಿ ಹಣವಗಳಿಸಿದ ಇಪ್ಪತ್ತು ದುಡ್ಡಿಗೆ ಸೇರು ತೀರ್ಥವ ।
ಒಪ್ಪದಲಿ ಕ್ರಯಮಾಡಿ ಕೊಡಿಸುವ । ಸರ್ಪಶಯನನ ಸಾರ್ವಭೌಮನ ।
ಅಪ್ಪ ವೆಂಕಟರಮಣನಂಘ್ರಿಯ ॥ ॥೨॥
ಉರದಿ ಸಿರಿದೇವಿ ಇರಲು ಕಂಡೆನು । ಉನ್ನತದ ಕೌಸ್ತುಭವ ಕಂಡೆನೋ ।
ಸುರರು ಕಿನ್ನರರು ನಾರದಾದಿ ಗಂಧರ್ವರೆಡಬಲದಲ್ಲಿ ಕಂಡೆನೋ । ತರತರದಿ
ಭಕ್ತರಿಗೆ ವರಗಳ ಕರೆದುಕೊಡುವುದ ನಾನುಕಂಡೆನೋ । ಶರಧಿ ಶಯನನ
ಸಾರ್ವಭೌಮನ ವರದ ವೆಂಕಟರಮಣನಂಘ್ರಿಯ । ಕಂಡೆ ಕಂಡೆ
ಸಾಮಿಯ ಬೇಡಿಕೊಂಡೆ ॥ ॥೩॥

.. .. ..

ಬಂದು ನಿಂದಿಹ ನೋಡಿ, ಭೂತಳದಿ ವೆಂಕಟ ಇಂದಿರೆಯೊಡಗೂಡಿ
ಒಪ್ಪುವಾ ನಿರಂತರ ಬಂದು ಭಜನೆಯಮಾಡಿ, ಆನಂದಗೂಡಿ ವಂದಿಸುತ
ಮನದೊಳಗೆ ಇವನಡಿ ದ್ವಂದ್ವ ಭಜಿಸಲು ಬಂದ ಭಯಹರ । ಇಂದುಧರ ಸುರ
ವೃಂದಗೋವಿಂದನನು ದಯಾಸಿಂಧು ಶ್ರೀಹರಿ ಬಂದುನಿಂದಿಹ ॥
ದ್ವಾರದೆಡಬಲದಲ್ಲಿ ಜಯವಿಜಯರೀರ್ವರು ಸೇರಿ ಸೇವಿಪರಲ್ಲಿ, ಸನಕಾದಿನುತ
ಶೃಂಗಾರನಿಧಿ ಅಂಗದಲ್ಲಿ । ಮುತ್ತಿನಲಿ ಶೋಭಿಪ ಹಾರಪೊಂದಿಪುದಲ್ಲಿ ವಿಸ್ತಾರದಲ್ಲಿ

ವಾರವಾರಕೆ ಪೂಜೆಗೊಳ್ಳುವ ಹಾರಪದಕ ಕರ್ಣಕುಂಡಲ, ದ್ವಾರಯುಗಕೇಯೂರ
ಭೂಷಿತ, ಮಾರಪಿತಗಣ ಮೋಹನಾಂಗ । ಚಾರುಪೀತಾಂಬರ ಕಟೀಕರ
ವೀರಕಲ್ಹಾರಾದಿ ಪೂಜಿಪ । ಹಾರ ಕೊರಳೊಳು ಎಸೆಯುತಿರೆ ಸಿರಿವರನಾರಿ
ವಂದ್ಯನು ನಗುತ ನಲಿಯುತ ॥ ॥೧॥

ಎಲ್ಲ ಭಕುತರಭೀಷ್ಟ ಕೊಡುವುದಕೆ ತಾ ಕೈವಲ್ಯ ಸ್ಥಾನವ ಬಿಟ್ಟ । ಶೇಷಾದ್ರಿ
ಮಂದಿರದಲ್ಲಿ ಲೋಲುಪದಿಟ್ಟ, ಸೌಭಾಗ್ಯ ನಿಧಿಗೆದುರಿಲ್ಲ ಭುಜಬಲಪುಷ್ಟ,
ಕಸ್ತೂರಿ ಇಟ್ಟ, ಚೆಲ್ವಫಣೆಯಲಿ ಶೋಭಿಸುವ, ಸಿರಿವಲ್ಲಭನ ಪೊಗಳುತಿಹ ಜಗ
ಉಲ್ಲರಣ ಚಂದ್ರಣ ಪರಾಕ್ರಮ ಮಲ್ಲಮರ್ದನ ಮಾತುಳಾರಿ, ಫಲ್ಗುಣನ ಸಖ
ಪ್ರಕಟನಾಗಿಹ ದುರ್ಲಭನ ಅಘದೂರ ಬಹುಮದಿಗಲ್ಯ ಹೃದಯನು ಸೃಷ್ಟಿಗೆ
ಉಲ್ಲಾಸ ಕೊಡುತಲಿ ಚಂದದಿಂದಲಿ ॥ ॥೨॥

ಪದಕ ಕೌಸ್ತುಭಹಾರ । ಸರಿಗೆಯಾ ಕಂಡಾ । ಸುದರನುನೋದ್ಧಾರ । ಸುಂದರ
ಮನೋಹರ । ಪದಯುಗದಿನೂಪುರ । ಇಟ್ಟಿಹನು ಸನ್ಮಣಿ ಹೃದಯಸ್ಥಿತಿ ಗಂಭೀರ ।
ಬಹುದಾನಶೂರ, ಉದುಭವಾದಿಗಳೀವ ಕರ್ತನು । ತುದಿಮೊದಲು ಮಧ್ಯವು

ವಿರಹಿತನು ತ್ರಿಜಗಪೂಜಿಪ ತ್ರಿಭುವನೇಶ । ಸದವಿಲಾಸದಿ
ಸ್ವಾಮಿತೀರ್ಥದಿ ಉದಿಸುತಿರೆ । ಸಿರಿಮಹಿಳೆಯುಸಹಿತ । ಪದುಮನಾಭ
ಪುರಂದರ ವಿಠಲನು ಪ್ರತಿವರುಷದಿ ಬ್ರಹ್ಮೋತ್ಸವದಿ ಮೆರೆಯುತ ।
ಬಂದು ನಿಂದಿಹ ॥ ॥೩॥

ಕೇವಲ ಕೈವಲ್ಯ ಇಲ್ಲೀದೊರೆವುದು । ಮಾಧವನಿಹನೋಡೊ । ಗಿರಿನಾಥ ॥ಪ॥

ಈ ವಿಷಯದಿ ನೀ ಲಂಪಟನಾಗದೆ । ದೇವದೇವನ ಭಜಿಸಿ ಸುಖಿಯಾಗೊ
ಮನುಜ ॥ಅಪ॥

ತನ್ನ ಕರದಿ ತನ್ನ ಪಾದವ ತೋರುತ । ಮುನ್ನ ಮನುಜ ಮುಕ್ತನಾಗೆನುತ ।
ಹೊನ್ನುಹೊಕ್ಕುಳಿಯೊಳು ರನ್ನಿಟ್ಟು ನಲಿಯುವ । ಘನಮಹಿಮ
ಗಿರಿವಾಸ ವೆಂಕಟನಿಂದಾ ॥ ॥೧॥

ಎಡಬಲದಲಿ ಶ್ರೀದೇವಿ ಭೂದೇವಿಯರ್ । ಬಿಡದೆ ಚಾಮರವನ್ನು
ಪಿಡಿದಿರಲು ಮಡದಿಯರ್ಗಡಣದಿ । ನಡುವೆ ಶೋಭಿಸುತೆ । ಕಡಲಸ್ಥಾನವಬಿಟ್ಟು
ಗಿರಿಗೆ ಬಂದುದರಿಂದಾ ॥ ॥೨॥

79

ಪ್ರೇಮದಿ ಭಜಿಸುವ ಭಕ್ತಜನರಿಗೆಲ್ಲಾ | ಕಾಮಿತಾರ್ಥವನೀವ ಬಹುದಾತ ।
ಸ್ವಾಮಿ ಪುಷ್ಕರಣಿಯ ತೀರದಿ ನೆಲಸಿಹ । ಸ್ವಾಮಿ ಶ್ರೀ ಪುರಂದರ ।
ವಿಠಲರಾಯನಿಂದಾ । ಕೇವಲ ಕೈವಲ್ಯ ॥ ॥೩॥



# ಶಯನೋತ್ಸವ

ಪವಡಿಸು ಪರಮಾತ್ಮನೆ । ನೀನು ।
ಭವರೋಗ ವೈದ್ಯ ಭಕ್ತರ ನಿಧಿಯೆ ॥ಪ॥
ಕುಂದಣದಿ ರಚಿಸಿದ ಸಜ್ಜೆಮನೆಯಲ್ಲಿ ।
ಇಂದ್ರಮಾಣಿಕಮಯ ಮಂಟಪದಿ ।
ಚಂದ್ರಚಂದದ ಠಾಣ ದೀವಿಗೆ ಹೊಳೆಯುತ ।
ಸಿಂಧುಶಯನ ಆನಂದದಿಂದ ॥೧॥
ತೂಗು ಮಂಚದಿ ಹಂಸತೂಲದ ಹಾಸಿಗೆ ।
ನಾಗಸಂಪಿಗೆ ಹೂವಿನ ಒರಗು ।
ಸಾಗರಸುತೆ-ಸಮ್ಮೇಳದಿಂದಲಿ ಅತಿ ।
ಭೋಗವ ಪಡುತ ಓಲಾಡುತಿರು ॥೨॥
ಸದ್ದಡಗಿತು ವೇಳೆ ಗಂಟೆ ಸಾಗಿತು ಬೀಗ ।
ಮುದ್ರೆಗಳಾಗಿದೆ ಬಾಗಿಲಿಗೆ ।
ತಿದ್ದಿದ ಧವಳಶಂಖಗಳ ನಾದದಿಂದ ।
ಪದ್ಮನಾಭ ಶ್ರೀ ಪುರಂದರವಿಠಲ ॥೩॥

ಕೆಂದಾವರೆಯ ಪೋಲುವ ಪಾದಕೆ ಅಂದಿಗೆ ಗೆಜ್ಜೆಯು ।
ಉಂಗುರ ಉಡಿದಾರ ವಜ್ರ ಬಂಗಾರ ನಿಟ್ಟಗೇ ೧
ಎರಡು ಕರದಿ ಶಂಖ ಚಕ್ರವು ಗದೆಯು ಪದ್ಮವು । ನೊಸಳಿಗೇ
ಕಸ್ತೂರಿ ತಿಲಕ ಕುಶಲದಿಂದಲೀ ೨
ಮರವನೇರಿ ವೇಣು ಕೊಳಲ ಪಿಡಿದ ಧೀರನಿಗೆ । ದುರುಳ
ಕ್ಷತ್ರಿಯ ಕುಲವನಳಿದ ಉಡುಪಿ ಕೃಷ್ಣನಿಗೇ ೩
ಶೇಷಗಿರಿಯಲ್ಲಿ ನಿಂದು ವಾಸವಾದಗೇ । ದಾಸರಿಂದಾ ಪೂಜೆ
ಗೊಳುವ ವೆಂಕಟೇಶಗೇ । ಬೆಟ್ಟದೊಡೆಯ ೪

---

# ಶ್ರೀ ವೆಂಕಟೇಶ್ವರ ಪರ

ರಾಗ ಚಾಂದ್ ತ್ರಿತಾಳ

ವೆಂಕಟೇಶ ವೆಂಕಟನಾಯಕ ವೆಂಕಟರಮಣ ಕೃಪಾಕರ ।
ಸಂಕಟಹರ ಸಂಶಯ ಹರ ಶುಭಕರ । ವೆಂಕಟನಾಥನೆ ದಯಾಕರಾ ॥೧॥
ಭೃಗು ಲಾಂಛನಧರ ಸದಾ ಅಭಯಕರ । ನಗಧರ ಶ್ರೀಕರ ಕೃಪಾಕರ ।
ಭೃಗು ಗರ್ವಾಪಹಾರ ಮುರಲೀಧರ । ಜಗದೋದ್ಧಾರ ದಯಾಕರಾ ॥೨॥
ಆದಿ ವರಾಹ ಅನಾದಿ ಜಗನ್ಮಯ । ಆದಿಪುರುಷ ಹರಿ ಕೃಪಾಕರಾ ॥
ಆದಿ ಮಧ್ಯಾಂತರಹಿತ ಜಗತ್ಪತೇ । ಆದಿಕೇಶವನೆ ದಯಾಕರ ॥೩॥
ರಮಾರಮಣ ರಿಪುದೈತ್ಯ ನಿವಾರಣಾ । ರಮಿತ ಗೋಪೀಜನ ಕೃಪಾಕರ ॥
ರಮಣ ರಮವಾಣ ಅಮಿತ ಭಕ್ತ ಜನ । ನಮಿತ ಪದಯುಗಳ ದಯಾಕರಾ ॥
ವಾಸುದೇವ ವಾರಿಧಿಶಯನನೆ ಹರಿ । ವಾಸವಾದಿನುತ ದಯಾಕರ ।
ಕೇಶವ ಕಲಿಮಲನಾಶಕ ಪೋಷಕ । ದಾಸಕೇಶವನುತ ದಯಾಕರಾ ॥೪॥

# ಶ್ರೀ ವೆಂಕಟೇಶ ದಂಡಕ

ಶ್ರೀಮತ್ಪರಂಧಾಮ ಜೀವಾವಳಿಸ್ತೋಮ । ಶ್ರೀಮಾನಿನೀಲೋಲ । ಶೃಂಗಾರ ಸಲ್ಲೀಲ ಕಂದರ್ಪಲಾವಣ್ಯ । ಕಂಜೋದ್ಭವಾಗಣ್ಯ ಷಾಡ್ಗುಣ್ಯಸಂಪನ್ನ । ಸಂರಕ್ಷಿತಾಪನ್ನ । ಸತ್ಯವ್ರತಾಚಾರ್ಯ । ಸಾಧುಪ್ರಜೋದ್ಧಾರ । ಸಾರಾಂಬುಧಶ್ಯಾಮ । ಸಂಪೂರ್ಣ ಸತ್ಕಾಮ ವೇದಾಂತ ಸಂಚಾರ । ವಿಶ್ವಂಭರಾಧಾರ । ಶ್ರೀ ವೆಂಕಟಾಧೀಶ । ಸಚ್ಚಿತ್ಪ್ರಕಾಶ । ಪರಂ಼ಕೇಶ । ಲೋಕೇಶ । ವಾಗೀಶ ಗೌರೀಶ ನಾಗೇಶ ವಂದ್ಯಾಂಘ್ರಿ । ಪದ್ಮದ್ವಯಾ ನಿತ್ಯಸತ್ಯಾದ್ವಯಾ । ಸದ್ದಯಾ ಸಾಂದ್ರ ಯೋಗೀಂದ್ರ । ಹೃತ್ಪದ್ಮಶೃಂಗ ಶುಭಾಂಗ । ಸುಚಾರಿತ್ರಾಬ್ಜ । ಮಿತ್ರಾ ಧರಿತ್ರೀ ಮನೋಲ್ಲಾಸ । ದಾನಪ್ರಿಯಾ । ಶ್ರೀನಿವಾಸ ನಮ್ಮನ್ನು ಕೃಪೆಯಿಂದ ನೋಡು ತಂದೆ । ಸಿರಿಗೊಂಡವಾಸ । ನರಸಿಂಹಾವತಾರ । ನಮಸ್ತೆ ನಮಸ್ತೆ ನಮಃ

---

# ನಾರಾಯಣ ಪರ

ಓಂ ನಮೋ ಭಗವತೇ ವಾಸುದೇವಾಯ ।
ದೇವದೇವಾಯ ವಾಸುದೇವಾಯ ॥ಪ॥

ಮಾಧವ ಮುಕುಂದ ಮುರಲೀಧರ ಓಂ ।
ಯಾದವ ಸುಂದರಚಿತ್ರಪ್ರಕಾಶ ಓಂ ॥
ಶ್ರೀಧರ ಸಾಧು ಸುಪೂಜಿತ ಪದಯುಗ ।
ಆದಿಪುರುಷ ನರನಾರಾಯಣ ಓಂ ॥೧॥

ಮಧುಸೂದನ ಧ್ರುವ ವರದ ಶ್ರೀ ಹರಿ ಓಂ ।
ಯದುಕುಲ ತಿಲಕ ಪ್ರಹ್ಲಾದ ವರದ ಓಂ ।
ಹೃದಯ ಮಂದಿರದಿ ಒದಗಿ ಪೊರೆವ ಹರಿ ।
ಸದಾನಂದ ಸಚ್ಚಿದಾನಂದಮಯ ಓಂ ॥೨॥

ಗೋಪೀಜನಮನರಂಜನ ಹರಿ ಓಂ ।
ಗೋಪಾಲಕಂಸ ಪ್ರಭಂಜನ ಹರಿ ಓಂ ।

ಶಾಪಾನುಗ್ರಹ ಸಮರ್ಥ ಕೇಶವ ।
ಪಾಪ ತಾಪಹರ ಶ್ರೀಪತಿ ಹರಿ ಓಂ ॥೩॥

ಶಂಖ ಚಕ್ರಗದಾ ಪದ್ಮಧಾರಿ ಓಂ ।
ಪಂಕಜಲೋಚನ ಕೃಷ್ಣ ವಿಷ್ಣು ಓಂ ॥
ಶಂಕರ ಸೇವಿತ ಕಿಂಕರ ಸನ್ನುತ ।
ವೆಂಕಟರಮಣ ಪದ್ಮಾವತೀ ಪತಿ ಓಂ ॥೪॥

ರಾಧಾಮಾನಸ ರಾಜಹಂಸ ಓಂ ।
ರಾಧಾಕೃಷ್ಣ ಹರಿ ಮೇಘಶ್ಯಾಮ ಓಂ ॥
ವೇದೋದ್ಧಾರಕ ಸಾಧು ಸಜ್ಜನಪ್ರಿಯ ।
ಬಾದರಾಯಣನೆ ನಾರಾಯಣ ಓಂ ॥೫॥

ಈಶ ಲಕ್ಷ್ಮೀಶನೆ ಶೇಷಶಯನ ಓಂ ।
ಶ್ರೀಶರಮೇಶನೆ ರಾಧೇಶ್ಯಾಮ ಓಂ ॥
ಭಾಸುರಾಂಗ ಹರಿ ಭಾಗವತ ಪ್ರಿಯ ।
ದಾಸಕೇಶವನುತ ವಾಸುದೇವ ಓಂ । ॥೬॥

# ಶ್ರೀ ಕೃಷ್ಣ ಪರ

ರಾಗ ದರ್ಬಾರಿ ತ್ರಿತಾಳ

ಕನಕದಾಸರಿಗೆ ಒಲಿದ ಶ್ರೀಕೃಷ್ಣ ।
ಘನ ಮಹಿಮನೆ ಮುರಹರ ಶ್ರೀಕೃಷ್ಣ ॥
ಮನದೊಳನವರತ ನೆಲೆಸು ಶ್ರೀಕೃಷ್ಣ ।
ಮನುಮಥ ಜನಕನೆ ಉಡುಪಿ ಶ್ರೀಕೃಷ್ಣ ॥೧॥

ಪುರಂದರದಾಸರಿಗೊಲಿದ ಶ್ರೀಕೃಷ್ಣ ।
ಪುರಹರಪ್ರಿಯಮಾಧವ ಶ್ರೀಕೃಷ್ಣ ॥
ಪುರುಹೂತ ಸಂಭವನುತ ಶ್ರೀಕೃಷ್ಣ ।
ಪುರುಷೋತ್ತಮ ಹರಿ ಉಡುಪಿ ಶ್ರೀಕೃಷ್ಣ ॥೨॥

ವಾದಿರಾಜರಿಗೆ ಒಲಿದ ಶ್ರೀಕೃಷ್ಣ ।
ವೇದೋದ್ಧಾರಕ ಹರಿ ಶ್ರೀಕೃಷ್ಣ ॥

ಯಾದವ ಮಾಧವ ಶ್ರೀಧರ ಕೃಷ್ಣ ।
ಭೇದಿಸು ಭವಭಯ ಉಡುಪಿ ಶ್ರೀಕೃಷ್ಣ ॥೩॥

ಕ್ರುದ್ಧ ದೈತ್ಯ ಮರ್ದನ ಶ್ರೀಕೃಷ್ಣ ।
ಮದ್ದಾನೆಯ ಮಡುಹಿದ ಶ್ರೀಕೃಷ್ಣ ॥
ಕದ್ದು ಬೆಣ್ಣೆ ಮೊಸರನುಂಡ ಶ್ರೀಕೃಷ್ಣ ।
ಮಧ್ವಯತಿವರದ ಉಡುಪಿ ಶ್ರೀಕೃಷ್ಣ ॥೪॥

ಪಡುವಣ ಕಡಲಭಿಮುಖ ಶ್ರೀಕೃಷ್ಣ ।
ದೃಢ ಭಕ್ತರ ಹೃದಯಸ್ಥ ಶ್ರೀಕೃಷ್ಣ ।
ಜಲಜನಯನ ಗೋವಿಂದ ಶ್ರೀಕೃಷ್ಣ ।
ಕಡೆಗೋಲ್ ಪಿಡಿದ ಉಡುಪಿ ಶ್ರೀಕೃಷ್ಣ ॥೫॥

ಶೇಷ ಶಯನನೆ ಮುಕುಂದ ಶ್ರೀಕೃಷ್ಣ ।
ದೋಷ ಕ್ಷಮಿಸಿ ಎಮ್ಮ ಪೊರೆಯೋ ಶ್ರೀಕೃಷ್ಣ ॥
ಶ್ರೀಶ ತವಪದವ ತೋರೋ ಶ್ರೀಕೃಷ್ಣ ॥
ದಾಸಕೇಶವನುತ ಉಡುಪಿ ಶ್ರೀಕೃಷ್ಣ ॥೬॥

# ಆಂಜನೇಯ ಸ್ತೋತ್ರ

ಆಂಜನೇಯ ಹನುಮಂತ । ಶ್ರೀ ರಾಮಚಂದ್ರನ ಸದ್ಭಕ್ತ ।
ವಾಯುಃಪುತ್ರ ಸುಚರಿತ್ರ । ಭಾವಿ ವಿರಂಚಿಯೆ ಸುಪವಿತ್ರ ॥ ॥೧॥

ಸುಗ್ರೀವಸಖ ರಘುರಾಮದೂತ । ಶರಧಿಲಂಘಿಸಿದ ಬಲವಂತಾ ।
ಜನನಿಗುಂಗುರುವನಿತ್ತ ಭಕ್ತ । ರಾವಣ ವಿರೋಧಿ ಸರ್ವಶಕ್ತ ॥ ॥೨॥

ರಾಮನಾಮವನು ಪಾನಗೈವಾ । ರಾಮಚರಣದಾ ಸೇವೆಗೈವಾ ।
ರಾಮಾಯಣ ಕಥೆ ಶ್ರವಣಿಸುವಾ । ಭಕ್ತಜನಕೆ ಸುಖ ಕರುಣಿಸುವಾ ॥೩॥

ಭಾಸುರತೇಜನೆ ಹನುಮಂತಾ । ಕ್ಲೇಶಹರಿಸು ಪ್ರಭು ಹನುಮಂತಾ ॥
ದಾಶರಥಿಯ ದೂತ ಹನುಮಂತಾ । ದಾಸಕೇಶವನನುತ ಹನುಮಂತಾ ॥೪॥

.. .. ..

ಬಿಡುವೆನೇನಯ್ಯ ಹನುಮ । ಬಿಡುವೆನೇನಯ್ಯ ॥

ಹಸ್ತವ ಮುಗಿದರೇನು । ಹಾರುಗಾಲನಿಟ್ಟರೇನು ।
ಭೃತ್ಯಾನು ನಿನ್ನವ ನಾನು । ಹಸ್ತಿ ವರದನ ತೋರುವ ತನಕ ॥ ೮
ಡೊಂಕುವೋರೆ ಬಾಲವ ಸುತ್ತಿ । ಹೂಂಕರಿಸಿದರೆ ।
ಅಂಜುವನಲ್ಲ ಕಿಂಕರನು ನಿನ್ನವನು ನಾನು ವೆಂಕಟರಮಣನ
ತೋರುವ ತನಕ ॥ ೯

~~~~~~~~
~~~~~~~~

# ಶ್ರೀ ರಾಘವೇಂದ್ರ ಸ್ತೋತ್ರಂ

ಪೂಜ್ಯಾಯ ರಾಘವೇಂದ್ರಾಯ । ಸತ್ಯಧರ್ಮರತಾಯಚ ।
ಭಜತಾಂ ಕಲ್ಪವೃಕ್ಷಾಯ । ನಮತಾಂ ಕಾಮಧೇನವೆ ॥

ರಾಘವೇಂದ್ರಜೀಯ । ಭವರೋಗವೈದ್ಯ ತಾನಯ್ಯ ।
ಆಯ್ಯಾ ರಾಘವೇಂದ್ರ ಜೀಯ । ರಂಜಿಪ ಆ ವರ ಮಂತ್ರಾಲಯ ।
ಭಕುತರ ಶಾಂತಿಗೆ ಆಶ್ರಯ । ಆಯ್ಯಾ ರಾಘವೇಂದ್ರಜೀಯ ॥ ॥೧॥

ಆಡಂಬರಕೆ ತಾ ದೂರವಿರುವ । ಆರ್ತರಕರೆಗೆ ತಾನೋಡಿಬರುವ ।
ಆದರದಿಂದಲಿ ಸೇವಿಸಿಕಾಣುವ । ಅನಾಥರನಿಜ ಕಾಮಧೇನು
ಗುರು ರಾಘವೇಂದ್ರ ಜೀಯಾ ॥ ॥೨॥

ಬಾಳಲಿನೊಂದ । ಜನಹಿತಕಾಗಿ ಬೃಂದಾವನದಿ ನೆಲಸಿಹ ಯೋಗಿ ।
ಬೇಡಿದ ಕಾಮಿತವೀಯುವತ್ಯಾಗಿ । ಭಯಾರ್ತರಾ ಭಯನೀಗಿಕಾವಗುರು
ರಾಘವೇಂದ್ರಜೀಯ ॥ ॥೩॥

.. .. ..

ಬಿಡಲೊಲ್ಲೆ ನಾ ಬಿಡಲೊಲ್ಲೆ । ಅಡಿಗಳ ಪಿಡಿಯದೆ ನಾ ಹೋಗಲೊಲ್ಲೆ ॥
ಹುಡುಕುತ ಬಳಲಿದೆ ಬಾಳಿನಲ್ಲೇ ॥ ಕಡೆಯಲಿ ಗುರು ನಿನ್ನ ಕಂಡೆನಿಲ್ಲೇ ॥ಪ॥

ಒಡಲಿಗಾಗಿ ಜನರ ಹೊಗಳಿದ ಫಲದೇ ॥ ಜಡವಾಗಿದೆ ಎನ್ನ ನಾಲಿಗೆಯಿಂದೇ ॥
ಬಿಡದೆ ಹೊಗಳಿ ನಿನ್ನ ಒಲಿಸೆನೋ ತಂದೆ । ಒಡೆಯನೀನೆಂದೇ ಓಡುತಬಂದೆ ॥ ॥೧॥

ಕಾಡುವಲೋಕದ ಬಾಧೆಗೆನ್ನನು । ಈಡುಮಾಡಿ ದಯತೋರದೆ ಇನ್ನು ॥
ಅಡಗಿರೆ ನೀನು ಬೃಂದಾವನದಿ । ಬಿಡುವೆನೆ ರಾಘವ ನಿನ್ನ ನಾನು ॥ ॥೨॥

---

# ಸರಸ್ವತಿ ಸ್ತೋತ್ರ

ಕೊಡುಬೇಗ ದಿವ್ಯಮತಿ—ಸರಸ್ವತಿ—ಕೊಡುಬೇಗ ದಿವ್ಯಮತಿ ॥ಪ॥

ಮೃಡಹರಿ ಹಯಮುಖರೊಡೆಯಳೆ ನಿನ್ನಯ ।
ಅಡಿಗಳಿಗೆರಗುವೆ ಅಮ್ಮ ಬ್ರಹ್ಮನ ರಾಣಿ ॥ಅ.ಪ॥

ಇಂದಿರರಮಣನ ಹಿರಿಯ ಸೊಸೆಯು ನೀನು ।
ಬಂದೆನ್ನ ವದನದಿ ನಿಂದು ನಾಮವ ನುಡಿಸೆ ॥೧॥

ಅಖಿಲ ವಿದ್ಯಾಭಿಮಾನಿ ಅಜನ ಪಟ್ಟದ ರಾಣಿ ।
ಸುಖವಿತ್ತು ಪಾಲಿಸೆ ಸುಜನಶಿರೋಮಣಿ ॥೨॥

ಪತಿತಪಾವನೆ ನೀನೆ ಗತಿಯೆಂದು ನಂಬಿದೆ ।
ವಿತತ ಪುರಂದರವಿಠಲನ ತೋರಿಸೆ ॥೩॥

# ಶಾರದಾ ಸ್ತೋತ್ರ

ಲೋಕ ಮಾತೇ ವಿಮಲ ಚರಿತೆ ।
ದೇವಿ ಶಾರದಾಂಬೆಯೇ ॥
ಪಾಕಶಾಸನಾದಿವಂದ್ಯೇ ।
ಕಮಲ ಭವನ ಮಡದಿಯೇ ॥ ॥ಪ॥

ವಿದ್ಯೆಗಳಿಗೆ ಜನನಿಯಾದೆ ।
ಮುದ್ದು ನವಿಲನೇರಿದೇ ॥
ವಿದ್ಯೆಗಳನು ಕರುಣಿಸಮ್ಮ ।
ಧನ್ಯಳಾಗಿ ಮಾಳ್ಪಿತಾ ॥ ॥೧॥

ಕಮಲನೇತ್ರೇ । ಇಂದುವದನೆ
ಕೋಮಲಾಂಗಿ ಸುಂದರೀ ॥
ಭ್ರಮರವೇಣಿ ಹಂಸಗಮನೆ ॥
ಕೀರವಾಣಿ ಗುಣಮಣೀ ॥ ॥೨॥

ಸಾಕ್ಷಾತ್ ಕೃಷ್ಣನೆ ಲೋಕಕೆ ಕರೆದಾ ದಿವ್ಯಾಮೃತವದು ಗೀತೆ
ಉಪನಿಷತ್ಸಾರವ ಪ್ರತಿಪಾದಿಸುವಾ ಭುವನ ಮಾನ್ಯವದು ಗೀತೆ
ಪಾರ್ಥನ ಶೋಕವ ನೀಗಿಸಿ ತಟ್ಟನೆ ಶಂಕೆಯ ಬಿಡಿಸಿತು ಗೀತೆ
ದೇಹವು ಅಸ್ಥಿರ ಆತ್ಮನೆ ನಿತ್ಯನು ಎನ್ನುತ ಮೆರೆವುದು ಗೀತೆ
ಇಂದ್ರಿಯ ಗೆಲುವ ಬುದ್ಧಿಯು ಲೇಶವು ಅಲುಕದು ಎಂದಿತು ಗೀತೆ
ಕಷ್ಟದಿ ತಗ್ಗದೆ ಸೌಖ್ಯದಿ ಹಿಗ್ಗದೆ ಜೀವಿಸಿ ಎಂದಿತು ಗೀತೆ
ಫಲವನು ಬಯಸದೆ ಕರ್ಮವ ಮಾಳ್ಪುವ ಮರ್ಮವ ತಿಳಿಸಿತು ಗೀತೆ
ಫಲಗಳಪೇಕ್ಷೆಯ ಬಿಡುವರೆ ಶಾಂತಿಯ ಪೊಂದುವರೆಂದಿತು ಗೀತೆ
ಬುದ್ಧಿಯ ಕೆಡಿಸುವ ಪಾಪಕೆ ಹೇತುವು ಕಾಮವು ಎಂದಿತು ಗೀತೆ
ಸಕಲವನೊಂದೇ ದೃಷ್ಟಿಯಿಂ ನೋಡುವರ್ ಜ್ಞಾನಿಗಳೆಂದಿತು ಗೀತೆ
ತನ್ನಯ ಧರ್ಮದಿ ನಡೆಯುವ ನರನಿಗೆ ಸಿದ್ಧಿಯ ಬಯಸಿತು ಗೀತೆ
ಧರ್ಮಕು ಶಾಸ್ತ್ರಕು ವಿರಾರದ ಕರ್ಮಿಯೇ ಯೋಗಿಯು ಎಂದಿತು ಗೀತೆ

ಜ್ಞಾನದಿಂದಧಿಕವು ಬೇರೊಂದಿಲ್ಲವು ಎಂಬುದನರುಹಿತು ಗೀತೆ
ಜ್ಞಾನವ ಪೊಂದಲು ಸದ್ಗುರು ಸೇವೆಯ ಮಾಡಲು ಪೇಳಿತು ಗೀತೆ
ಜ್ಞಾನವೇ ಮುಕ್ತಿಗೆ ಪಥವೆಂದರಿವರು ಶ್ರೇಷ್ಠರು ಎಂದಿತು ಗೀತೆ
ಮನವನು ಎಲ್ಲವ ದೇವನಲಿಡುತಲಿ ಪೂಜಿಸಿ ಎಂದಿತು ಗೀತೆ
ಮಹಿಮೆಯನುಳ್ಳುವ ವಸ್ತುಗಳೊಳಗೆ ದೇವನಿಹನೆಂದಿತು ಗೀತೆ
ಸ್ವಾಮಿಯ ಮಹಿಮೆಯನದ್ಭುತ ರೂಪವ ಪಾರ್ಥಗೆ ತೋರಿತು ಗೀತೆ
ದೇವನ ಚರಣದ ನಿಶ್ಚಲ ಭಕ್ತಿಯ ಮಹಿಮೆಯನುಸುರಿತು ಗೀತೆ
ಸ್ವಾಮಿಯ ಭಕುತರಿಗೆಂತಹ ಸುಲಭನು ಎಂಬುದ ತೋರಿತು ಗೀತೆ
ಸ್ವಾಮಿಯೊಬ್ಬನೇ ಗತಿಯೆಂದೆಣಿಪರು ಬಹು ಪ್ರಿಯರೆಂದಿತು ಗೀತೆ
ಆತ್ಮವ ರೂಪವ ನಿಜದಿಂದರಿವರು ಶಾಂತರು ಎಂದಿತು ಗೀತೆ
ತ್ರಿಗುಣವ ದಾಟುತ ನಡೆವರು ದೇವನ ಪೊಂದುವರೆಂದಿತು ಗೀತೆ
ಪುರುಷೋತ್ತಮನಾ ಮಹಿಮೆಯನರಿವರು ಜ್ಞಾನಿಗಳೆಂದಿತು ಗೀತೆ
ಕಾಮವು ಕ್ರೋಧವು ಲೋಭವು ನರಕಕೆ ದ್ವಾರವು ಎಂದಿತು ಗೀತೆ
ಶಾಸ್ತ್ರವ ಮೀರದೆ ನಡೆವರೆ ಸಿದ್ಧಿಯ ಪೊಂದುವರೆಂದಿತು ಗೀತೆ

ದೈವೀಗುಣಗಳನಪ್ಪುತ ನಡೆವರು ಮುಕ್ತರು ಎಂದಿತು ಗೀತೆ
ದಾನವ ಧರ್ಮವ ಪಾತ್ರವನರಿಯುತ ಮಾಡಲು ಪೇಳಿತು ಗೀತೆ
ಕರ್ಮದಫಲ ಸಹಕರ್ತೃತ್ವ ಬಿಡುವರೆ ತ್ಯಾಗಿಗಳೆಂದಿತು ಗೀತೆ
ಕರ್ಮದಫಲಗಳ ದೇವನಿಗರ್ಪಿಸೆ ಹಿತವಹುದೆಂದಿತು ಗೀತೆ
ಸ್ವಾಮಿಯ ಚರಣವ ಶರಣವನೆಣಿಪುದೆ ತಾರಕವೆಂದಿತು ಗೀತೆ
ಪಾಪದಿಂ ಬಿಡಿಸಲು ನಾನೇ ಶಕ್ತನು ಎನ್ನುವ ಕೃಷ್ಣನ ಗೀತೆ
ಕೃಷ್ಣನು ಪಾರ್ಥನು ನೆಲೆಸಿಹ ಸ್ಥಳವೇ ಸ್ವರ್ಗವು ಎಂದಿತು ಗೀತೆ
ಗೀತೆಯ ಭಕ್ತಿಯಿಂ ಪಠಿಸುವರ್ ಶಾಂತಿಯ ಪೊಂದುವರೆಂದಿತು ಗೀತೆ
ಮನುಜನ ಇಹಪರ ಸೌಖ್ಯದ ಗುಟ್ಟನು ತಿಳಿಸುತ ಮೆರೆವುದು ಗೀತೆ

---

# ರಂಗವಲ್ಲಿ ಕೀರ್ತನೆ

ರಂಗವಲಿ ರಂಗವಲ್ಲಿ ರಂಗಾವಲೀ ।
ರಂಗವಲಿ ರಂಗವಲ್ಲಿ ರಂಗಾವಲೀ ॥

ಕಾರ್ಯಕಧಿಪಗೌರಿಸುತ ವಿನಾಯ್ಕ ಬಂದೊಲೀ ।
ಸರ್ವನುಡಿಗಳಾದಿ ಗೀರ್ವಾಣಿ ನೀನೊಲೀ ॥

ಪಕ್ಷಿಗಮನ ಲಕ್ಷ್ಮೀರಮಣ ವಿಷ್ಣು ಬಂದೊಲೀ ।
ಲಕ್ಷ್ಯವಿಟ್ಟು ಸ್ಮರಣೆಗೈವೆ ತಕ್ಷಣಾವಲೀ ॥

ಮತ್ಸ್ಯಕೂರ್ಮವರಹ ನಾರಸಿಂಹ ಬಂದೊಲೀ ।
ಸತ್ಯಶೀಲವಾಮ ಪರಶುರಾಮ ನೀನೊಲೀ ॥

ಜಾನಕೀಯ ಪ್ರೇಮ ಪದಕ ರಾಮ ಬಂದೊಲೀ ।
ಕಾಮಪಿತನೆ ರುಕ್ಮಿಣೀಶ ಕೃಷ್ಣ ನೀನೊಲೀ ॥

ತ್ರಿಜಗವಂದ್ಯ ಬುದ್ಧ ಕಲ್ಕಿದೇವ ಬಂದೊಲೀ ।
ಅಜಸುರೇಂದ್ರ ಭಕ್ತಪಾಲ ಶಕ್ತ ನೀನೊಲೀ ॥

ನಾನು ಭಜಿಸೋ ನಾಮರೂಪ ಸ್ವಾಮಿ ಬಂದೊಲೀ ।
ಸ್ವಾನುಭವ ಪ್ರಚೋದಿತಾತ್ಮ ರಾಮ ನೀನೊಲೀ ॥

ವಾಸ್ತು ಪುರಷ ಗೃಹದ ರಕ್ಷಮಿತ್ರ ಬಂದೊಲೀ ।
ಶಿಸ್ತಿನೊಲುವೆ ಯುಕ್ತಿಗಧಿಪ ಕರ್ತ ನೀನೊಲೀ ॥

ಬರೆವ ಚಿತ್ರದ್ದುಸೆಗೆ ಶೇಷಶಾಯಿ ಬಂದೊಲೀ ।
ಪರಮ ಪೂಜ್ಯ ಪಾಂಡುರಂಗ ವಿಠ್ಠಲಾವಲೀ ॥

ಶೃಂಗರಿಸುವೆ ಮಂಗಳಾಂಗ ರಂಗ ಬಂದೊಲೀ ।
ಅಂಗ ಸಂಗದಂತರಂಗ ಪ್ರೇಮಿ ನೀನೊಲೀ ।

ಬೇಡಿಕೊಂಬೆ ಪೊಡವಿಪಾಲ ಮೃಡನೆ ಬಂದೊಲೀ ।
ಹಾಡಿಪಾಡಿ ಕುಣಿವೆ ಗರುಡಗಮನ ನೀನೊಲೀ ॥

ತಡವ ಮಾಡಬೇಡ ಕಡಲಶಯನ ಬಂದೊಲೀ ।

ಕಾಲಸರ್ಪನ್ಹೆಡೆಯ ತುಳಿದ ಕಂದ ನೀನೊಲೀ ॥ ॥೧೭॥
ಹನುಮಹೃದಯವಾಸ ರಾಮ ತಾರಕಾವಲೀ ।
ಜನುಮದಾದಿ ಕಣದ ಸಂಜೀವ ನೀನೊಲೀ ॥ ॥೧೮॥



# ಆರತಿ

ಬಾಲನೆ ಬೆಳಗೆ ನೀಲದ ಆರುತಿ ಬಾಲಕೃಷ್ಣನಿಗೇ ।
ಶ್ರೀಹರಿಗೆ, ಬಾಲ ಕೃಷ್ಣನಿಗೇ ।

ಗೋಕುಲದಲ್ಲಿ ಹುಟ್ಟಿದನಂತೆ ಗೋವ ಕಾಯ್ದವಗೇ
ಶ್ರೀಹರಿಗೆ ಗೋವ ಕಾಯ್ದವಗೇ ೧

ಹತ್ತವತಾರ ಎತ್ತಿದ ಧೀರ । ಪೃಥ್ವೀಪಾಲಕನಿಗೇ ।
ಶ್ರೀಹರಿಗೆ ನಿತ್ಯ ತೃಪ್ತನಿಗೇ ೨

ತೊಳಸಿ ಸೀರ ಗೋಪ್ಯರ ಕೂಡಿ, ಸರಸವಾಡಿದವಗೇ
ಶ್ರೀಹರಿಗೇ ಹರುಷ ತೋರಿದವಗೇ ೩

ಇನಕುಲದೊಳವತರಿಸಿ ವನಕೆ ಗಮಿಸಿದ ಪಾದ
ಜನಕರಾಯನ ಕರದೊಳರ್ಚಿಸಿದ ಪಾದ ।
ಸನಕ ಕಮಲರ ಮನಕೆ ಗೋಚರ ಪಾದ
ಕನಕ ಮಣಿಖಚಿತ ಅಮಿಗೆಯುಳ್ಳ ಪಾದ ।

ಗೋಕುಲದೊಳಾಡುತಿಹ ಶ್ರೀ ಕರದ ಶ್ರೀ ಪಾದ ।
ವ್ಯಾಕುಲವ ಪರಿಹರಿಸಿ ತಾ ಪೊರೆದ ಪಾದ ।
ಜೋಕೆಯಿಂ ಕೆಡೆಹರಿದ ಶಾಕೆಗೇರಿದ ಪಾದ ।
ಭೀಕರದ ಫಣಿಶಿರದಿ, ತಾ ಕುಣಿದ ಪಾದ ।

ಚಲನೆ ಇಲ್ಲದೆ ಇಳೆಯ ಅಳೆದು ತೋರಿದ ಪಾದ
ಬಲಿಯು ಭಕ್ತಿಗೆ ಮೆಚ್ಚಿ ಪಾಲಿಸಿದ ಪಾದ ।
ಶಿಲೆಯು ಸೋಕಲು ಕನ್ಯಮಣಿ ಗೈಸಿದ ಪಾದ ।
ಇಳೆಗೆ ಕೌರವ ಪೀಠವನುರುಳಿಸಿದ ಪಾದ

ಸಾಗರಾತ್ಮನ ಕರದಿ ಪಿಡಿದು ಒತ್ತಿದ ಪಾದ ।
ನಾದನಗರದೊಳ್ ವಿದುರನಾಲಯದೋಳ್ ಪಾದ ।
ವೇಗದಲಿ ಸಂಚರಿಪ ಗರುಡನನೇರಿದ ಪಾದ ।
ಭಾಗೀರತಿಯನೆ ಪಡೆದ ಪಾವನದ ಪಾದ ।

ಕರದಿ ವಾಜಿಯು ಪಿಡಿದು ರಥ ವಿರಾಜಿಪ ಪಾದ ।
ಕರದ ಚಕ್ರದಿ ಭೀಷ್ಮನೆದೆಗಿರಿದ ಪಾದ ।
ತರುಣಿ ತನಯುನ ಶರಕೆ ತೇರನೊತ್ತಿದ ಪಾದ ।
ತರುಣಿ ದ್ರೌಪದಿ ಬಿಡದೆ ಧ್ಯಾನಿಸಿದ ಪಾದ ।

ತ್ರಿಜಗ ವಾಸಿಗಳೆಲ್ಲ ಒಲಿದುಪೂಜಿಪ ಪಾದ
ವಿಜಯಸೋಮನ ಕರದೊಳರ್ಚಿಸಿದ ಪಾದ ।
ನಿಜದಿ ಗೋಕರ್ಣಪುರ ನೆಲೆಯೋಳ್ ವಾಸಿಪ ಪಾದ
ಭಜನೆ ಗೈಯ್ಯುವ ಯೋಗನರಹರಿಯು ಪಾದ

ಲಾಲೀ, ಮೇಘಶ್ಯಾಮಲಾಲೀ ತಾಮರಸದಳನಯನತನಯಲಾಲೀ ॥

್ರಮವಿನುತ ಶತಪತ್ರನಯನ, ಮಿ ತ್ರ ವ ಂ ಶ ಜಾ ತ ನು ತ
ವಿಶ್ವಾಮಿತ್ರ ೧

ರತಾಟಕಾಂಗಹಾರ ತಾರ ತಂದವೋ, ಮೇಲುಗಿರಿವಾಸನುತ ನೀನೆ
ನಿಸ್ಸೀಮ

ಸತಿ ಶಾಪಮೋಕ್ಷ, ಸೀತಾರಮಣ, ಸಾಕೇತ ಪುರಾಧಿನುತ ಸರ್ವರಕ್ಷಕ

ನೀನು ಬಂಧು ನೀನು, ಬಾಂಧವ ನೀನು ಬಂದು ನಿಂದು ವಂದಿಸುವೆನು,
ಇಂದಿರಾ ರಮಣ

ು ನಾ ನಿನ್ನಲ್ಲದೇ ಮತ್ತನ್ಯ ದೈವವಾ, ಮರೆಯೆ ನೀ ಮಾಡುವಂಥ
ನಿತ್ಯುಪಕಾರವಾ

ನ್ನ ಕೊಂಡಾಡುವ ಮಂಗಳಾತ್ಮರಾ, ಸಂಗ ಸುಖದೊಳಿಟ್ಟು
ಕಾಯೋ ಕರುಣಾ ಸಾಗರಾ

ದಾನಿ ನೀನು ದೀನನಾನು ಧೇನುರಕ್ಷಕಾ ಮಾನಂದಿ ಪರಿಪಾಲಿಸೆಮ್ಮನು
ಶ್ರೀನಿವಾಸನೇ

ಕನಕಮಯದ ತೊಟ್ಟಿಲೊಳಗೆ ಇನುಕುಲೇಂದ್ರ, ವಿನಯದಿಂದ ಪವಡಿಸಯ್ಯ
ರಾಮಚಂದ್ರ



# ರಾಮನಾಗೂ ಮಗೂ - ಭೀಮನಾಗೂ

ನಾಗೂ ಮಗು ಭೀಮನಾಗೂ, ಸುತ್ರಾಮನಾಗು ನಿಸ್ಸೀಮನಾಗು
ನಾಗು ಮಗೂ ವಿಷ್ಣುವಾಗೂ, ಜಿಷ್ಣುವಾಗೂ ಪರಮತ ಸಹಿಷ್ಣುವಾಗೂ
ನಾಗು ಮಗು ಪರಿಶುದ್ಧನಾಗೂ, ಗೆದ್ದು ಜನನ ಮರಣಗಳನು
ಬುದ್ಧನಾಗು
ನಾಗೂ ಮಗು ಜನ ಸಂಸೇವ್ಯನಾಗೂ ಜೀವಿಗಳ ನೋವ ಬಿಡಿಸೆ
ಸಿದ್ಧನಾಗು
ನಾಗೂ ಕೇಶವನ ದಾಸನಾಗೂ, ದೇಶಸೇವೆ ಗೈದು ಬಹು
ಪ್ರಕಾಶನಾಗು

---

ರಾಗ: ಕಾಂಭೋಜಿ, ಝಂಪೆತಾಳ

ಇದು ಭಾಗ್ಯವಿದು ಭಾಗ್ಯವಿದು ಭಾಗ್ಯವಯ್ಯ ‖ ಪ ‖
ಪದುಮನಾಭನ ಪಾದ ಭಜನೆ ಸುಖವಯ್ಯ ‖ ಅ ‖

ಕಲ್ಲಾಗಿ ಇರಬೇಕು ಕಠಿನ ಭವತೊರೆಯೊಳಗೆ ।
ಬಿಲ್ಲಾಗಿ ಇರಬೇಕು ಬಲ್ಲವರೊಳಗೆ ।
ಮೆಲ್ಲನೆ ಮಾಧವನ ಮನವ ಮೆಚ್ಚಿಸಬೇಕು ।
ಬೆಲ್ಲವಾಗಿರಬೇಕು ಬಂಧುಜನರೊಳಗೆ ‖ ೧ ‖

ಬುದ್ಧಿ ಬಲ ತನುಮನವ ತಿದ್ದಿಕೊಳ್ಳಲು ಬೇಕು ।
ಮುದ್ದಾಗಬೇಕು ಮುನಿಯೋಗಿಗಳಿಗೆ ‖
ಮಧ್ವಮತಾಬ್ಧಿಯೊಳು ಮೀನಾಗಿರಲು ಬೇಕು ।
ಶುದ್ಧನಾಗಿರಬೇಕು ಶರಣಾತ್ಮಯರುಗಳಲಿ ‖ ೨ ‖

ವಸುಧೀಶ ಪುರಂದರವಿಠಲರಾಯನ ।
ಹಸನಾದ ದಾಸರ ಸೇವಿಸಲು ಬೇಕು ॥ ೩ ॥

ರಾಗ : ಕಲ್ಯಾಣಿ, ಅಟತಾಳ

ಇನ್ನೂ ದಯ ಬಾರದೆ। ದಾಸನ ಮೇಲೆ ।
ಇನ್ನೂ ದಯ ಬಾರದೆ ॥ ಪ ॥

ಪನ್ನಗಶಯನ ಪಾಲ್ಗಡಲೊಡೆಯನೆ ಕೃಷ್ಣ ॥ ಅ ॥

ನಾನಾ ದೇಶಗಳಲ್ಲಿ ನಾನಾ ಕಾಲಗಳಲ್ಲಿ ।
ನಾನಾ ಯೋನಿಗಳಲ್ಲಿ ಮಡಿದು ಪುಟ್ಟಿ ॥
ನಾನು ನನ್ನದುಯೆಂಬ ನರಕದೊಳಗೆ ಬಿದ್ದು ।
ನೀನೇ ಗತಿಯೆಂದು ನಂಬಿದ ದಾಸನ ಮೇಲೆ ॥ ೧ ॥

ಕಾಮಾದಿ ಷಡ್ವರ್ಗಗಾಢಾಂಧಕಾರದಿ ।
ಪಾಮರನಾಗಿಹ ಘಾತಕಿಯು ‖
ಮಾ ಮನೋಹರನೆ ಚಿತ್ತಜನಕನೆ ।
ನಾಮವೆ ಗತಿಯೆಂದು ನಂಬಿದ ದಾಸನ ಮೇಲೆ ‖ ೨ ‖

ಮನಸಾ ವಾಚಾ ಕಾಯದಿ ಮಾಳ್ಪ ಕರ್ಮವು ।
ದಾನವಾಂತಕ ನಿನ್ನಾಧೀನವಲ್ತೆ ‖
ಏನು ಮಾಡಿದರೇನು ಪ್ರಾಣ ನಿನ್ನದು ಸ್ವಾಮಿ ।
ಶ್ರೀನಾಥ ಪುರಂದರ ವಿಠಲ ದಾಸನ ಮೇಲೆ ‖ ೩ ‖

ರಾಗ : ಬೇಹಾಗ್, ಅಟತಾಳ

ಬೇವು ಬೆಲ್ಲದೊಳಿಡಲೇನು ಫಲ ।
ಹಾವಿಗೆ ಹಾಲೆರೆದೇನು ಫಲ ‖ ಪ ‖

ಸಟೆಯನ್ನಾಡುವ ಮನುಜರು ಮನದಲಿ ।
ವಿಠಲನ ನೆನೆದರೆಯೇನು ಫಲ

ಕಪಟತನದಿ ವಂಚಿಸುವ ಮನುಜರು ।
ಜಪಗಳ ಮಾಡಿದರೇನು ಫಲ ॥
ಕುಪಿತ ಬುದ್ಧಿಯನು ತ್ಯಜಿಸದೆ ನಿತ್ಯದಿ ।
ಉಪವಾಸವಿದ್ದರೆ ಏನು ಫಲ

ಮಾತಾಪಿತರನು ಬಳಲಿಸುವ ಮಗ ।
ಯಾತ್ರೆಯ ಮಾಡಿದರೇನು ಫಲ ॥
ಘಾತಕತನವನು ಬಿಡದೆ ನಿರಂತರ ।
ಗೀತೆಯನೋದಿದರೇನು ಫಲ

ಪತಿಯನು ನಿಂದಿಸಿ ಬೊಗಳುವ ಸತಿಯಳು ।
ವ್ರತಗಳ ಮಾಡಿದರೇನು ಫಲ ।
ಅತಿಥಿಗಳೆಡೆಯಲಿ ಭೇದವ ಮಾಡುತ ।
ಗತಿಯನು ಬಯಸಿದರೇನು ಫಲ

ಹೀನಕೃತ್ಯಗಳ ಮಾಡುತ ನದಿಯಲಿ ।
ಸ್ನಾನವ ಮಾಡಿದರೇನು ಫಲ ॥
ಶ್ರೀನಿಧಿ ಪುರಂದರವಿಠಲನ ನೆನೆಯದೆ ।
ಮೌನವ ಮಾಡಿದರೇನು ಫಲ

ರಾಗ: ಕಲ್ಯಾಣಿ, ಅಟತಾಳ

ಕಲ್ಲುಸಕ್ಕರೆ ಕೊಳ್ಳಿರೊ । ನೀವೆಲ್ಲರು ।
ಕಲ್ಲುಸಕ್ಕರೆ ಕೊಳ್ಳಿರೋ

ಕಲ್ಲುಸಕ್ಕರೆ ಸವಿ ಬಲ್ಲವರೆ ಬಲ್ಲರು ।
ಫುಲ್ಲಲೋಚನ ಶ್ರೀ ಕೃಷ್ಣ ನಾಮವೆಂಬ

ಎತ್ತು ಹೇರುಗಳಿಂದ ಹೊತ್ತು ಮಾರುವುದಲ್ಲ ।
ಒತ್ತೊತ್ತಿ ಗೋಣಿಯೊಳ್ತುಂಬುವುದಲ್ಲ ॥

ಎಷ್ಟು ಒಯ್ದರು ಬೆಲೆ ರೊಕ್ಕವಿದಕಿಲ್ಲ ॥
ಕಟ್ಟಿರುವೆಯು ತಿಂದು ಕಡಿಮೆಯಾಗುವುದಿಲ್ಲ ।
ಪಟ್ಟಣದೊಳಗೆ ಪ್ರಸಿದ್ಧವಾಗಿರುವಂಥ ॥ ೨

ಸಂತೆ ಸಂತೆಗೆ ಹೋಗಿ ಶ್ರಮಪಡಿಸುವುದಲ್ಲ ।
ಸಂತೆಯೊಳಗೆ ಇಟ್ಟು ಮಾರುವುದಲ್ಲ ॥
ಸಂತತ ಭಕ್ತರ ನಾಲಿಗೆ ಸವಿಗೊಂಬ ಕಾಂತ ।
ಪುರಂದರ ವಿಠಲನ ನಾಮವೆಂಬ ॥ ೩

ರಾಗ: ಮುಖಾರಿ, ಝಂಪೆತಾಳ

ಆರು ಹಿತವರು ನಿನಗೆ ಈ ಮೂವರೊಳಗೆ ।
ನಾರಿಯೋ ಧಾರುಣಿಯೋ ಬಲು ಧನದ ಸಿರಿಯೋ ॥ ಪ

ಅನ್ಯರಲಿ ಜನಿಸಿರ್ದ ಅಂಗನೆಯ ಕರೆತಂದು ।
ತನ್ನ ಮನೆಗವಳ ಯಜಮಾನಿಯೆನಿಸಿ ॥

ಛಿನ್ನವಿಲ್ಲದಲರ್ಧ ದೇಹವೆನಿಸುವ ಸತಿಯು ।
ಕಣ್ಣಿನಲಿ ನೋಡಲಂಜ್ವಳು ಕಾಲವಶದಿ ॥ ॥ ೧

ಮುನ್ನ ಶತಕೋಟಿ ರಾಯರುಗಳಾಳಿದ ನೆಲದ ।
ತನ್ನದೆಂದೆನುತ ಶಾಸನವ ಬರೆಸಿ ॥
ಬಿನ್ನಣದ ಮನಕಟ್ಟೆ ಕೋಟಿಕೊತ್ತಲವಿಕ್ಕಿ ।
ಚೆನ್ನಿಗನ ಅಸುವಳಿಯೆ ಹೊರಗೆ ಹಾಕುವರು ॥ ॥ ೨

ಉದ್ಯೋಗ ವ್ಯವಹಾರ ನೃಪಸೇವೆ ಕುಶಲಗತಿ ।
ಕ್ಷುದ್ರತನ ಕಳವು ಪರದ್ರೋಹದಿಂದ ।
ಬುದ್ಧಿಯಿಂದಲಿ ಗಳಿಸಿ ಸಿಕ್ಕಿದಂಥರ್ಥವನು ।
ಸದ್ಯದಲ್ಲಾರು ಉಂಬವರ್ ಹೇಳು ಮನುಜ ॥ ॥ ೩

ಶೋಕವನು ಗೈಯುವರು ಸತಿಸುತರು ಬಾಂಧವರು ।
ಜೋಕೆ ತಪ್ಪಿದ ಬಳಿಕ ಅರ್ಥವ್ಯರ್ಥ ॥
ಲೋಕದೊಳು ಗಳಿಸಿರ್ದ ಪುಣ್ಯ ಪಾಪಗಳೆರಡು ।

ಚಿತ್ತದೊಳು ಶುದ್ಧಿಯಿಂ ಪುರಂದರ ವಿಠಲನೆ ।
ಉತ್ತಮೋತ್ತಮನೆಂದು ಸುಖಿಯಾಗು ಮನುಜ॥ ॥ ಆರು ।

ರಾಗ - ಮುಖಾರಿ : ಝಂಪೆತಾಳ

ನಾನೇಕೆ ಬಡವನು । ನಾನೇಕೆ ಪರದೇಶಿ ॥
ಶ್ರೀನಿಧೇ ಹರಿ ಎನಗೆ ನೀನಿರುವ ತನಕ ॥ಪ॥

ಪುಟ್ಟಿಸಿದ ತಾಯ್ತಂದೆ ಇಷ್ಟಮಿತ್ರನು ನೀನೆ ।
ಅಷ್ಟ ಬಂಧುವು ಸರ್ವಬಳಗ ನೀನೇ ॥
ಪೆಟ್ಟಿಗೆಯೊಳಗಿನ ಅಷ್ಟಾಭರಣ ನೀನೆ ।
ಶ್ರೇಷ್ಠ ಮೂರುತಿ ಕೃಷ್ಣ ನೀನಿಹುವ ತನಕ ॥೧॥

ಒಡಹುಟ್ಟಿದವ ನೀನೆ । ಒಡಲಿಗ್ಹಾಕುವ ನೀನೆ ।
ಉಡಲು ಹೊದಿಯಲು ವಸ್ತ್ರ ಕೊಡುವ ನೀನೇ ॥

ಮಡದಿ ಮಕ್ಕಳನೆಲ್ಲ ಕಡೆಹಾಯ್ಸುವವ ನೀನೆ ।
ಬಿಡದೆ ಸಲಹುವ ಒಡೆಯ ನೀನಿರುವ ತನಕ ॥೨॥

ವಿದ್ಯೆ ಹೇಳುವ ನೀನೆ ಬುದ್ಧಿ ಕಲಿಸುವ ನೀನೆ ।
ಉದ್ಧಾರಕರ್ತ ಮಮ ಸ್ವಾಮಿ ನೀನೆ ॥
ಮುದ್ದು ಸಿರಿ ಪುರಂದರವಿಠಲ ನಿನ್ನಡಿ ಮೇಲೆ ।
ಬಿದ್ದುಕೊಂಡಿರುವ ಎನಗೇತರ ಭಯವೋ ॥೩॥

ರಾಗ – ಪೂರ್ವಿಕಲ್ಯಾಣಿ : ಅಟತಾಳ

ತೇಲಿಸೋ ಇಲ್ಲ ಮುಳುಗಿಸೋ ।
ನಿನ್ನ ಕಾಲಿಗೆ ಬಿದ್ದೆನೊ ಪರಮ ಕೃಪಾಳೊ ॥ಪ॥

ಸತಿ ಸುತ ಧನದಾಸೆ ಎಂದೆಂಬ ಮೋಹದಿ ।
ಹಿತದಿಂದ ಆತಿನೊಂದು ಬೆಂಡಾದೆನೊ ॥
ಗತಿ ಕೊಡುವರ ಕಾಣೆ ಮತಿಯ ಪಾಲಿಸೊ ಲಕ್ಷ್ಮೀ ।

[illegible] ॥
ಸ್ಥಿರವಲ್ಲ ದೇಹವು ನೆರೆ ನಂಬಿದೆ ನನ್ನ ।
ಕರುಣಾಭಯವಿತ್ತು ಪಾಲಿಸೊ ಹರಿಯೇ ॥೨

ದೋಷವುಳ್ಳವ ನಾನು ಭಾಷೆಯುಳ್ಳವ ನೀನು ।
ಮೋಸ ಹೋದೆನೊ ಭಕ್ತಿ ರಸವ ಬಿಟ್ಟು ॥
ಶೇಷಶಯನ ಶ್ರೀ ಪುರಂದರವಿಠಲನೆ ।
ದಾಸರ ಸಂಗವಿತ್ತು ಪಾಲಿಸೊ ಹರಿಯೇ ॥೩

ರಾಗ - ಕಾಂಭೋಜಿ : ಝಂಪೆತಾಳ

ತಂಗಿಗ್ಹೇಳಿದ ಕೃಷ್ಣ ಚಂದದಲಿ ಬುದ್ಧಿ ॥ಪ

ಅತ್ತೆಯ ಮನೆಯಲ್ಲಿ ಇರುವಂಥ ಸುದ್ದಿ ॥ಅ

ಯಾರೇನು ಅಂದರೂ ಮೋರೆಯನು ತಿರುಹದಿರು ।
ಮೋರೆ ಮೇಲಕೆ ಎತ್ತಿ ಬಲ್ಲಳೆಂದೆನಿಸಿ ॥

ವಾರಿಗೆಯವರ ಕೂಡಿ ನೀರನ್ನು ತರುವಾಗ ।
ದಾರಿಗಣ್ಣಲಿ ನೋಟ ನೋಹವಿರು ಕಂಡ್ಯ ॥೧॥

ಪರರ ಒಡವೆಯ ಕಂಡು ದುರುಳ ಮಾತಾಡದಿರು ।
ನೆರೆಹೊರೆಯವರಿಗೆ ನೀನು ತಲೆವಾಗಿ ನಡೆಯೇ ॥
ಪರರ ಮಾತುಗಳಿಂದ ಮರುಳಳೆಂದು ಎಣಿಸಬೇಡ ।
ನೆರೆಹೊರೆಯವರ ಕಂಡು ನೀ ಬದುಕು ಮಾಡಮ್ಮ ॥೨॥

ಬಂಗಾರದ ಪೇಟೆಯೊಳು ಅಂಗಡಿಗೆ ಹೋಗದಿರು ।
ಅಂಗನೇರಿಗೆ ಮಾನಭಂಗಾಗಿ ನಡೆಯೆ ।
ಅಂಗನೇರಿಗೆ ನಿನ್ನಂತರಂಗವ ಹೇಳದಿರು ॥
ಬಂಗಾರ ವಸ್ತುಗಳ ಮುಚ್ಚಿಕೊಳ್ಳಮ್ಮ ॥೩॥

ಹಾಕುವುಂದಿಯೊಡನೆ ಜೋಕೆ ಮಾತಾಡದಿರು ।
ಲೋಕದೊಳವಳೊಬ್ಬ ಮೂಕಿಯೆಂದೆನಿಸೆ

ಇಷ್ಟರು ಅಂದರು ನಿಷ್ಠೂರ ಮಾಡಿದರು ।
ಗಟ್ಟಿ ಮಾಡಮ್ಮ ನಿನ್ನ ಮನಸು ।
ಸೃಷ್ಟಿಯೊಳಗೆ ನಮ್ಮ ಪುರಂದರ ವಿಠಲನ್ನ ।
ಶ್ರೇಷ್ಠನಾದ ಕೃಷ್ಣನ ತಂಗಿಯೆಂದೆನಿಸೆ

ರಾಗ - ಪೂರ್ವಿ : ಅಟತಾಳ

ಧರ್ಮಕ್ಕೆ ಕೈಬಾರದೀ ಕಾಲ ।
ಪಾಪ ಕರ್ಮಕ್ಕೆ ಮನಸೋಲೋದೀ ಕಾಲ

ದಂಡದ್ರೋಹಕೆ ಉಂಟು ।
ಪುಂಡು ಪೋಕರಿಗುಂಟು ।
ಹೆಂಡತಿ ಮಕ್ಕಳಿಗಿಲ್ಲವೀ ಕಾಲ ॥
ದಿಂಡೇರಿಗುಂಟು ।

ಜಗಭಂಡರಿಗುಂಟು ।
ಆಂಡಲೆವರಿಗಿಲ್ಲವೀ ಕಾಲ ॥

ವುತ್ತೆ ಕಳ್ಳರಿಗುಂಟು ।
ನಿತ್ಯ ಹಾದರಕುಂಟು ।
ಉತ್ತಮರಿಗಿಲ್ಲವೀ ಕಾಲ ॥
ತೊತ್ತೇರಿಗುಂಟು ಕಾಟಕೀಗುಂಟು ।
ಹೆತ್ತ ತಾಯಿಗಿಲ್ಲವೀ ಕಾಲ॥

ಹುಸಿ ದಿಟವಾಯಿತು ।
ರಸ ಕಸವಾಯಿತು ।
ಸೊಸೆ ಅತ್ತೆ ದಂಡಿಸೋದೀಕಾಲ ॥
ಬಿಸಜಾಕ್ಷ ಪುರಂದರವಿಠಲನ ಮನದಲ್ಲಿ ।
ಸ್ಮರಿಸುವವರಿಗಿಲ್ಲವೀ ಕಾಲ

# ಮಗಳಿಗೆ ತಂದೆ ತಾಯಿಯರ ಬೋಧನೆ

ಬುದ್ಧಿ ಮಾತು ಹೇಳಿದರೆ ಕೇಳಬೇಕಮ್ಮ ಮಗಳೆ-ಮನ
ಶುದ್ಧಳಾಗಿ ಗಂಡನೊಡನೆ ಬಾಳಬೇಕಮ್ಮ ॥ಪ॥

ಅತ್ತೆ ಮಾವರಿಗಂಜಿಕೊಂಡು ನಡೆಯಬೇಕಮ್ಮ-ಮಗಳೆ ।
ಚಿತ್ತದೊಲ್ಲಭನಕ್ಕರೆಯನ್ನು ಪಡೆಯಬೇಕಮ್ಮ ॥
ಹೊತ್ತು ಹೊತ್ತಿಗೆ ಮನೆಯ ಕೆಲಸ ಮಾಡಬೇಕಮ್ಮ-ಮಗಳೆ ।
ಹತ್ತು ಮಂದಿ ಒಪ್ಪುವ ಹಾಗೆ ನುಡಿಯ ಬೇಕಮ್ಮ ॥೧॥

ಕೊಟ್ಟು ಕೊಂಬುವ ನೆಂಟರೊಡನೆ ದ್ವೇಷ ಬೇಡಮ್ಮ ಮಗಳೆ ।
ಆಟ್ಟು ಉಂಬುವ ಕಾಲದಲ್ಲಿ ಆಟ ಬೇಡಮ್ಮ ॥
ಹಟ್ಟ ಬಾಗಿಲಲ್ಲಿ ಬಂದು ನಿಲ್ಲಬೇಡಮ್ಮ ಮಗಳೆ ।
ಕಟ್ಟಿ ಆಳುವ ಗಂಡನೊಡನೆ ಸಿಟ್ಟು ಬೇಡಮ್ಮ ॥೨॥
ನೆರೆಹೊರೆಯವರಿಗೆ ನ್ಯಾಯವನ್ನು ಹೇಳಬೇಡಮ್ಮ-ಮಗಳೆ ।
ಗರುವ ಕೋಪ ಮತ್ಸರವನ್ನು ಮಾಡಬೇಡಮ್ಮ ॥

ಪರರ ನಿಂದಿಪ ಹೆಂಗಳೊಡನೆ ಸೇರಬೇಡಮ್ಮ-ಮಗಳೆ ।
ಗುರು ಪುರಂದರವಿಠಲನ ಸ್ಮರಣೆ ಮರೆಯ ಬೇಡಮ್ಮ

ರಾಗ - ಮಧ್ಯಮಾವತಿ : ಆದಿತಾಳ

ಭಾಗ್ಯದ ಲಕ್ಷ್ಮೀ ಬಾರಮ್ಮ । ನಮ್ಮಮ್ಮ ನೀ ಸೌ ।
ಬಾಗ್ಯದ ಲಕ್ಷ್ಮೀ ಬಾರಮ್ಮ

ಗೆಜ್ಜೆ ಕಾಲ್ಗಳ ಧ್ವನಿಯ ತೋರುತ ।
ಹೆಜ್ಜೆಯ ಮೇಲೆ ಹೆಜ್ಜೆಯನಿಕ್ಕುತ ॥
ಸಜ್ಜನ ಸಾಧು ಪೂಜೆಯ ವೇಳೆಗೆ ।
ಮಜ್ಜಿಗೆಯೊಳಗಿನ ಬೆಣ್ಣೆಯಂತೆ

ಕನಕವೃಷ್ಟಿಯ ಕರೆಯುತ ಬಾರೆ ।

ಅತ್ತಿತ್ತಗಲದೆ ಭಕ್ತರ ಮನೆಯಲಿ ।
ನಿತ್ಯ ಮಹೋತ್ಸವ ನಿತ್ಯ ಸುಮಂಗಲ ॥
ಸತ್ಯವ ತೋರುವ ಸಾಧು ಸಜ್ಜನರ ।
ಚಿತ್ತದಿ ಹೊಳೆಯ ಪುತ್ಥಳಿ ಬೊಂಬೆ

ಸಂಖ್ಯೆಯಿಲ್ಲದ ಭಾಗ್ಯವ ಕೊಟ್ಟು ।
ಕಂಕಣ ಕೈಯ ತಿರುವುತ ಬಾರೆ ॥
ಕುಂಕುಮಾಂಕಿತೆ ಪಂಕಜಲೋಚನೆ ।
ವೆಂಕಟರಮಣನ ಬಿಂಕದ ರಾಣಿ

ಸಕ್ಕರೆ ತುಪ್ಪ ಕಾಲುವೆ ಹರಿಸಿ ।
ಶುಕ್ರವಾರದ ಪೂಜೆಯ ವೇಳೆಗೆ ॥
ಅಕ್ಕರೆವುಳ್ಳ ಅಳಗಿರಿ ರಂಗನ ।
ಚೊಕ್ಕ ಪುರಂದರವಿಠಲನ ರಾಣಿ

ರಾಗ – ಶಂಕರಾಭರಣ : ಅಟತಾಳ

ಅಂಬಿಗ ನಾ ನಿನ್ನ ನಂಬಿದೆ । ಜಗ ।
ದಂಬ ರಮಣ ನಾ ನಂಬಿದೆ

ತುಂಬಿದ ಹರಿಗೋಲಂಬಿಗ ।
ಅದಕೊಂಭತ್ತು ಛಿದ್ರವು ಅಂಬಿಗ ॥
ಸಂಭ್ರಮದಿಂ ನೋಡಂಬಿಗ ।
ಅದರಿಂಬು ನೋಡಿ ನಡೆಸಂಬಿಗ

ಹೊಳೆಯ ಭರವ ನೋಡಂಬಿಗ । ಅದಕೆ ।
ಸೆಳವು ಘನವಯ್ಯ ಅಂಬಿಗ ॥
ಸುಳಿಯೊಳು ಮುಳುಗಿದೆ ಅಂಬಿಗ । ಎನ್ನ
ಸೆಳೆದುಕೊಂಡೊಯ್ಯೊ ನೀನಂಬಿಗ

ಸತ್ಯವೆಂಬುದೆ ಹುಟ್ಟಂಬಿಗ । ಸದಾ ।
ಭಕ್ತಿಯೆಂಬುವೆ ಪಥವಂಬಿಗ ॥
ನಿತ್ಯಮೂರುತಿ ಪುರಂದರ ವಿಠಲ । ನಮ್ಮ ।
ಮುಕ್ತಿಮಂಟಪಕೊಯ್ಯೊ ಅಂಬಿಗ

ರಾಗ – ಕಾಂಭೋಜಿ : ಝಂಪೆತಾಳ

ಸಕಲ ಗ್ರಹಬಲ ನೀನೆ ಸರಸಿಜಾಕ್ಷ

ನಿಖಿಳ ರಕ್ಷಕ ನೀನೆ ವಿಶ್ವವ್ಯಾಪಕನೆ

ರವಿ ಚಂದ್ರ ಬುಧ ನೀನೆ ರಾಹು ಕೇತುವು ನೀನೆ ।
ಕವಿ ಗುರು ಶನಿಯು ಮಂಗಳನು ನೀನೆ ।
ದಿನರಾತ್ರಿಯು ನೀನೆ ನವವಿಧಾನವು ನೀನೆ ।
ಭವರೋಗಹರ ನೀನೆ ಭೇಷಜನು ನೀನೆ

ಪಕ್ಷಮಾಸವು ನೀನೆ ಪರ್ವಕಾಲವು ನೀನೆ ।
ನಕ್ಷತ್ರಯೋಗ ತಿಥಿ ಕರಣ ನೀನೆ ॥
ಅಕ್ಷಯವೆಂದು ದ್ರೌಪದಿಯ ಮಾನವ ಕಾಯ್ದ ।
ಪಕ್ಷಿವಾಹನ ದೀನರಕ್ಷಕನು ನೀನೆ ॥೨॥

ಋತುವತ್ಸರವು ನೀನೆ ವ್ರತ ಯುಗಾದಿಯು ನೀನೆ
ಕ್ರತು ಹೋಮ ಯಜ್ಞ ಸದ್ಗತಿಯು ನೀನೆ ॥
ಜಡವಾಗಿ ಎನ್ನೊಡೆಯ ಪುರಂದರ ವಿಠಲನೆ ।
ಶ್ರುತಿಗೆ ಸಿಲುಕದ ಮಹಾಮಹಿಮನು ನೀನೆ ॥೩॥



# “ ಹೂವ ಪ್ರಸಾದ ಬೇಡುವುದು ”

ಹೂವ ಪಾಲಿಸೊ ರಂಗ ಹೂವ ಪಾಲಿಸೊ ಕೃಷ್ಣ ।
ಹೂವ ಪಾಲಿಸಯ್ಯ ಮುದ್ದು ರಾಜಗೋಪಾಲ ॥ಪ॥

ನೀರಜಾಕ್ಷ ನಿಮ್ಮ ಪಾದ ತೋರುವುದೆಂದಿಗೊ । ಸ್ವಾಮಿ ।
ವಾರಿಜನಯ್ಯನೆ ಮುದ್ದು ಮುರಾರಿ ಕೃಷ್ಣ ರಾಜ
ಕುಲ ರಾಜ ಸಿಂಧು ರಾಜ ಭೂಪತಿ ರಾಜ । ರಾಜಧಾನಿಗೆ ।
ಒಲಿದು ಇತ್ತೆ । ಜಾಜಿ ಸಂಪಿಗೆಯ ಸರವ ॥೧॥

ಎಳೆ ತುಳಸಿ ಮಾಲೆಗಳ ಸರಗಳ ಧರಿಸಿರುವ ದೇವ ।
ಲಲಿತದಿಂದ ಲಕ್ಷ್ಮಿ ಸಹಿತ । ಒಲಿದು ನಿಮ್ಮ ।
ಒಲಿದು ನಿಮ್ಮ ಪಾದದಲ್ಲಿ ಇರುವ ಮಲ್ಲಿಗೆಯ ಸರವ ॥೨॥

ಸೃಷ್ಟಿಯಲ್ಲಿ ಶ್ರೀರಂಗ ಪಟ್ಟಣದೊಳ್ ಪವಡಿಸಿದೆಯೋ ।
ವಜ್ರದ ಕೊಳಗವು । ನಿನ್ನ ತಲೆಯಲಿಟ್ಟಿದೆ ।
ತಿದ್ದಿದ ಕಸ್ತೂರಿ ಬಟ್ಟು । ಮಗ್ಗುಲಿಂದ ಪವಡಿಸಿದೆಯೋ ।
ಮುದ್ದು ರಂಗನಾಥ ನಿಮ್ಮ ಮುಡಿಯ ಮೇಲಿರುವ ಹೂವ ॥೩॥

# ಕೇಶವ ನಾಮ

( ಕನಕದಾಸ ವಿರಚಿತ )

ಈಶ ನಿನ್ನ ಚರಣ ಭಜನೆ । ಆಸೆಯಿಂದ ಮಾಡುವೆನು ।
ದೋಷರಾಶಿ ನಾಶಮಾಡು ಶ್ರೀಶಕೇಶವ

ಶರಣು ಹೊಕ್ಕೆನಯ್ಯ ಎನ್ನ । ಮರಣ ಸಮಯದಲ್ಲಿ ನಿನ್ನ
ಚರಣ ಸ್ಮರಣೆ ಕರುಣಿಸಯ್ಯ ನಾರಾಯಣ

ಶೋಧಿಸೆನ್ನ ಭವದ ಕಲುಷ । ಬೋಧಿಸಯ್ಯ ಜ್ಞಾನವೆನಗೆ ।
ಬಾಧಿಸುವ ಯಮನ ಬಾಧೆ ಬಿಡಿಸೋ ಮಾಧವ

ಹಿಂದನೇಕ ಯೋನಿಗಳಲಿ | ಬಂದು ಬಂದು ನೊಂದೆನಯ್ಯ ।
ಇಂದು ಭವದ ಬಂಧ ಬಿಡಿಸೊ ತಂದೆ ಗೋವಿಂದ

ಕವಿದುಕೊಂಡು ಇರುವ ಪಾಪ । ಸವೆದು ಪೋಗುವಂತೆ ಮಾಡಿ ।
ಜವನ ಬಾಧೆಯನ್ನು ಬಿಡಿಸೋ ಶ್ರೀ ತ್ರಿವಿಕ್ರಮ

ಕಾಮಜನಕ ನಿನ್ನ ನಾಮ । ಪ್ರೇಮದಿಂದ ಪಾಡುವಂಥ ।
ನೇಮವೆನಗೆ ಪಾಲಿಸಯ್ಯ ಸ್ವಾಮಿ ವಾಮನ

ಮೊದಲು ನಿನ್ನ ಪಾದಪೂಜೆ । ಒದಗುವಂತೆ ಮಾಡೊ ಎನ್ನ ।
ಹೃದಯದೊಳಗೆ ಸದನ ಮಾಡು ಮುದದಿ ಶ್ರೀಧರ

ಹುಸಿಯನಾಡಿ ಹೊಟ್ಟೆ ಹೊರೆವ । ವಿಷಯದಲ್ಲಿ ರಸಿಕನೆಂದು ।
ಹುಸಿಗೆ ಹಾಕದಿರೋ ಎನ್ನ ಹೃಷೀಕೇಶನೆ

ಕಾಮಕ್ರೋಧ ಬಿಡಿಸಿ ನನ್ನ । ನಾಮ ಜಿಹ್ವೆಯೊಳಗೆ ನುಡಿಸೊ ।
ಶ್ರೀ ಮಹಾನುಭಾವನಾದ ದಾಮೋದರ

ಬಿದ್ದು ಭವದನೇಕ ಜನುಮ । ಬದ್ಧನಾಗಿ ಕಲುಷದಿಂದ ।
ಗೆದ್ದು ಪೋಪ ಬುದ್ಧಿ ತೋರೋ ಪದ್ಮನಾಭನೇ

ಪಂಕಜಾಕ್ಷ ನೀನು ಎನ್ನ । ಮಂಕು ಬುದ್ಧಿಯನ್ನು ಬಿಡಿಸಿ ।
ಕಿಂಕರನ್ನ ಮಾಡಿಕೊಳ್ಳೊ ಸಂಕರ್ಷಣ

ಏಸು ಜನ್ಮ ಬಂದರೇನು । ದಾಸನಲ್ಲವೇನು ನಾನು ।
ಘಾಸಿ ಮಾಡದಿರು ಇನ್ನು ವಾಸುದೇವನೆ

ಬುದ್ಧಿ ಶೂನ್ಯನಾಗಿ ಎನ್ನ । ಬದ್ಧ ಕಾಯ ಕುಹಕ ಮನವ ।
ತಿದ್ದಿ ಹೃದಯ ಶುದ್ಧ ಮಾಡೊ ಪ್ರದ್ಯುಮ್ನನೆ

ಜನನಿ ಜನಕ ನೀನೆಯೆಂದು । ನೆನೆವೆನಯ್ಯ ದೀನಬಂಧು ।
ಎನಗೆ ಮುಕ್ತಿ ಪಾಲಿಸಿಂದು ಅನಿರುದ್ಧನೆ

ಹರುಷದಿಂದ ನಿನ್ನ ನಾನು । ಸ್ಮರಿಸುವಂತೆ ಮಾಡು ಕ್ಷೇಮ ।

ಭೇದವಮಾಡದಿರು ಎನ್ನ ಅಧೋಕ್ಷಜ

ಚಾಠುಚರಣ ತೋರಿ ಎನಗೆ । ಪಾರುಗಾಣಿಸಯ್ಯ ಕೊನೆಗೆ ।
ಭಾರ ಹಾಕಿರುವೆ ನಿನಗೆ ನಾರಸಿಂಹನೆ

ಸಂಚಿತಾರ್ಥ ಪಾಪಗಳು । ಕಿಂಚಿತಾದ ಪೀಡೆಗಳು ।
ಮುಂಚಿತವಾಗಿ ಕಳೆಯಬೇಕು ಸ್ವಾಮಿ ಅಚ್ಯುತ

ಜ್ಞಾನ ಭಕುತಿ ಕೊಟ್ಟು ನಿನ್ನ । ಧ್ಯಾನದಲ್ಲಿ ನೆಟ್ಟು ಸದಾ ।
ಹೀನ ಬುದ್ಧಿ ಬಿಡಿಸೊ ಮುನ್ನ ಶ್ರೀಜನಾರ್ಧನ

ಜಪತಪಾನುಷ್ಠಾನವಿಲ್ಲ । ಕುಪಿತಗಾಮಿಯಾದ ಎನ್ನ ।
ಕೃಪೆಯ ಮಾಡಿ ಕ್ಷಮಿಸಬೇಕು ಉಪೇಂದ್ರನೇ

ಮೊರೆಯ ಇಡುವೆನಯ್ಯ ನಿನಗೆ । ಶರಧಿಶಯನ ಶುಭದಮತಿಯ ।
ಇರಿಸೊ ಭಕ್ತರೊಳು ಪರಮಪುರುಷ ಶ್ರೀಹರೇ

೧

ಪುಟ್ಟಿಸಲೇ ಬೇಡ ಇನ್ನು । ಪುಟ್ಟಿಸಿದಕೆ ಪಾಲಿಸೆನ್ನ ।
ಇಷ್ಟು ಮಾತ್ರ ಬೇಡಿಕೊಂಬೆ ಶ್ರೀಕೃಷ್ಣನೇ

ಸತ್ಯವಾದ ನಾಮಗಳನು । ನಿತ್ಯದಲ್ಲಿ ಪಠಿಸುವರಿಗೆ ।
ಆರ್ತಿಯಿಂದ ಸಲಹುತಿರುವ ಕರ್ತೃ ಕೇಶವ

ಮರೆಯದೆಲೆ ಹರಿಯ ನಾಮ । ಬರೆದು ಓದಿ ಪೇಳ್ದವರಿಗೆ ।
ಕರೆದು ಮುಕ್ತಿ ಕೊಡುವ ನೆಲೆಯಾದಿಕೇಶವ



# ಹರಿ ಭಕ್ತಿ ಸಾರ

(ಶ್ರೀ ಕನಕದಾಸ ವಿರಚಿತ)

ಶ್ರೀಯರಸ ಗಾಂಗೇಯನುತ ಕೌಂ । ತೇಯ ವಂದಿತ ಚರಣ ಕಮಲದ ।
ಛಾಯತಾಂಬಕರೂಪ ಚಿನ್ಮಯ ದೇವಕೀತನಯ ॥
ರಾಯರಘುಕುಲವರ್ಯ ಭೂಸುರ । ಪ್ರೀಯ ಸುರಪುರನಿಲಯ ಚೆನ್ನಿಗ ।
ರಾಯ ಚತುರೋಪಾಯ ರಕ್ಷಿಸು ನಮ್ಮನನವರತ

ಕ್ಷೀರವಾರಿಧಿಶಯನ ಶಾಂತಾ । ಕಾರ ವಿವಿಧವಿಚಾರ ಗೋಪೀ ।
ಜಾರ ನವನೀತಚೋರ ಚಕ್ರಾಧಾರ ಭವದೂರ ॥
ಮಾರಪಿತ ಗುಣಹಾರ ಸರಸಾ । ಕಾರ ರಿಪುಸಂಹಾರ ತುಂಬುರು ।
ನಾರದ ಪ್ರಿಯ ವರದ ರಕ್ಷಿಸು ನಮ್ಮನನವರತ

ವೇದಶಾಸ್ತ್ರ ಪುರಾಣ ಪುಣ್ಯದ । ಹಾದಿಯನು ನಾನರಿಯೆ ತರ್ಕದ ।
ವಾದದಲಿ ಗುರುಹಿರಿಯರರಿಯದ ಮೂಢಮತಿಯೆನಗೆ ।

ಹರಿವರಿತು ತಾಯ್ತನ್ನ ಶಿಶುವಿಗೆ । ಒಸೆದು ಪಾಲ್ ಗೊಡುವಂತೆ ನೀ ಪೋ ।
ಷಿಸದೆ ಬೇರಿನ್ನಾರು ಪೋಷಕರಾಗಿ ಸಲಹುವರು ॥
ಬಸಿರೊಳಗೆ ಬ್ರಹ್ಮಾಂಡಕೋಟಿಯ । ಪಸರಿಸಿದ ಪರಮಾತ್ಮ ನೀನೆಂ ।
ದುಸುರುತಿವೆ ವೇದಗಳು ರಕ್ಷಿಸು ನಮ್ಮನನವರತ ॥

ಸಿರಿಯು ಕುಲಸತಿ ಸುತನು ಕಮಲಜ । ಹಿರಿಯ ಸೊಸೆ ಶಾರದೆ ಸಹೋದರಿ ।
ಗಿರಿಜೆ ಮೈದುನ ಶಂಕರನು ಸುರರೆಲ್ಲ ಕಿಂಕರರು ।
ನಿರುತ ಮಾಯೆಯು ದಾಸಿ ನಿಜಮಂ । ದಿರವಜಾಂಡವು ಜಂಗಮ ಸ್ಥಾ ।
ವರ ಕುಟುಂಬಿಗ ನೀನು ರಕ್ಷಿಸು ನಮ್ಮನನವರತ

ಬಲಿಯ ಬಂಧಿಸಿ, ಮೊರೆಯಿಡುವ ಸತಿ ।
ಗೊಲಿದು ಅಕ್ಷಯವಿತ್ತು ಕರುಣದಿ, ಮೊಲೆಯನುಣಿಸಿದ ಪೂತನಿಯ
ಪಿಡಿದಸುವನಪಹರಿಸಿ ॥
ಶಿಲೆಯ ಸತಿಯಳ ಮಾಡಿ, ತ್ರಿಪುರದ । ಲಲನೆಯರ ವ್ರತಗೆಡಿಸಿ ಹೂಡಿದ ।

ಪಟ್ಟವಾರಿಂದಾಯ್ತು ಧ್ರುವನಿಗೆ ಕೊಟ್ಟ ವರ ತಪ್ಪಿತೆ ಕುಚೇಲಗೆ ।
ಇಷ್ಟ ಬಾಂಧವ ನೀನು ರಕ್ಷಿಸು ನಮ್ಮನನವರತ

ತನ್ನ ದೇಹಾತುರದೊಳಡವಿಯೊ । ಳನ್ಯರನು ಸಂಹರಿಸುತಿರುತಿರೆ ।
ನಿನ್ನ ನಾಮದೊಳಧಿಕವೆರಡಕ್ಷರವ ಬಣ್ಣಿಸುತ ॥
ಧನ್ಯನಾದನು ಮುನಿಕುಲದಿ ಸಂಪನ್ನನಾದನು ನೀನೊಲಿದ ಬಳಿ ।
ಕಿನ್ನು ಪಾತಕವುಂಟೆ ರಕ್ಷಿಸು ನಮ್ಮನನವರತ ॥

ಗತಿವಿಹೀನರಿಗಾರು ನೀನೇ । ಗತಿಕಣಾ ಪತಿಕರಿಸಿ ಕೊಂಡು ಸ ।
ದ್ಗತಿಯ ನೀನೆಲೆ ದೇವ ನಿನಗಪರಾಧಿ ನಾನಲ್ಲ ॥
ಶ್ರುತಿವಚನವಾಡುವುದು ಶರಣಾ । ಗತರ ರಕ್ಷಕನೆಂದು ನಿನ್ನನು ।
ಮತಿವಿಡಿದು ನಂಬಿದೆನು ರಕ್ಷಿಸು ನಮ್ಮನನವರತ ॥

ಗಣನೆಯಿಲ್ಲದ ಜನನಿಯರು । ಮೊಲೆಯುಣಿಸಲಾ ಪಯಬಿಂದುಗಳನದ ।
ನೆಣಿಸಲಳವೇ ಸಪ್ತಸಾಗರಕಧಿಕವೆನಿಸುವುದು ॥
ಬಣಗು ಕಮಲಜನದಕೆ ತಾನೇ । ಮಣಿಯಗಾರನು ಈತ ಮಾಡಿದ ।
ಕುಣಿಕೆಗಳ ನೀ ಬಿಡಿಸಿ ರಕ್ಷಿಸು ನಮ್ಮ ನನವರತ ॥

ಎಂಟು ಗೇಣಿನ ದೇಹ ರೋಮಗ । ಳೆಂಟು ಕೋಟಿಯು ಕೀಲ್ಗಳರವತ್ತೆಂ
ಮಾಂಸಗಳಿಂದ ಮಾಡಿದ ಮನೆಯ ಮನವೊಲಿದು ॥
ನೆಂಟ ನೀನಿರ್ದಗಲಿದೊಡೆ ಒಣ । ಹೆಂಟೆಯಲಿ ಮುಚ್ಚುವರು ದೇಹದೊ
ಳುಂಟೆ ಫಲ ಪುರುಷಾರ್ಥ ರಕ್ಷಿಸು ನಮ್ಮನನವರತ ॥

ನೀರ ಮೇಲಣ ಗುಳ್ಳೆಯಂದದಿ । ತೋರಿಯಡಗುವ ದೇಹವೀ ಸಂ ।
ಸಾರ ಬಹಳಾರ್ಣವದೊಳಗೆ ಮುಳುಗಿದೆನು ಪತಿಕರಿಸಿ ॥
ತೋರಿಸಚಲಾನಂದ ಪದವಿಯ । ಸೇರಿಸಕಟಾ ನಿನ್ನವೊಲು ನಮ ।
ಗಾರು ಬಾಂಧವರುಂಟು ರಕ್ಷಿಸು ನಮ್ಮನನವರತ ॥

ವರುಷ ನೂರಾಯುಷ್ಯವದರೊಳ । ಗಿರುಳು ಕಳದೈವತ್ತು ಐವ
ತ್ತರಲಿ ವಾರ್ಧಿಕ ಬಾಲ್ಯ ಕೌಮಾರದಲಿ ಮೂವತ್ತು ॥
ಇರದೆ ಸಂದುದು ಬಳಿಕವಿಪ್ಪ । ತ್ತರುಷವದರೊಳಗಾದುದಂತಃ ।
ಕರಣ ನಿನ್ನೊಳು ತೋರಿ ರಕ್ಷಿಸು ನಮ್ಮನನವರತ ॥

ಗಳನು ಲಾಲಿಸಿ ಕೇಳ್ವ ಪರಿಣತರಂತೆ ನೀನೆನಗ ।
ತಿಳುಹಿ ಮತಿಯನು ಎನ್ನ ಜಿಹ್ವೆಗೆ । ಮೊಳಗುವಂದದಿ ನಿನ್ನ ನಾಮಾ
ವಳಿಯ ಪೊಗಳಿಕೆ ಇತ್ತು ರಕ್ಷಿಸು ನಮ್ಮನನವರತ ॥
ದೀನ ನಾನು ಸಮಸ್ತ ಲೋಕಕೆ। ದಾನಿ ನೀನು ವಿಚಾರಿಸಲು ಮತಿ।
ಹೀನ ನಾನು ಮಹಾಮಹಿಮ ಕೈವಲ್ಯಪತಿ ನೀನು ।
ಏನ ಬಲ್ಲೆನು ನಾನು ನೆರೆಸು । ಜ್ಞಾನ ಮೂರುತಿ ನೀನು ನಿನ್ನ ಸ ।
ಮಾನರುಂಟೇ ದೇವ ರಕ್ಷಿಸು ನಮ್ಮನನವರತ ॥
ಯಾರ ನಾಮವನೊಲಿದು ಪಾಡುವೆ । ಯಾರ ಪಾದವ ಪೂಜೆ ಮಾಡು
ಯಾವ ಮೂರುತಿ ನೆನೆವೆ ಮನದೊಳು ನೀನರಿಯದಂತೆ ॥
ಯಾರು ಗತಿಮತಿ ಯಾರು ದಿಕ್ಕೆನ । ಗಾರು ನೀನಲ್ಲದೆ ಕಾರುಣಿಕ ವೈ
ದೋರಿ ರಕ್ಷಿಸು ನಮ್ಮನನವರತ ॥

## ಕನಕದಾಸರ ಮೊರೆ

ಬಾಗಿಲನೆ ತೆರೆದು ಸೇವೆಯನು ಕೊಡು ಹರಿಯೆ

ಕೂಗಿದರು ಧ್ವನಿ ಕೇಳಲಿಲ್ಲವೇ ನರಹರಿಯೆ
ಪರಮಪದದೊಳಗೆ ವಿಷಧರನ ತಲ್ಪದಲಿ ನೀ ।
ಸಿರಿಸಹಿತ ಕ್ಷೀರವಾರಿಧಿಯೊಳಿರಲು ॥
ಕರಿರಾಜ ಕಷ್ಟದಲಿ ಆದಿಮೂಲಾ ಎಂದು ।
ಕರೆಯಲಾಕ್ಷಣ ಬಂದು ಒದಗಿದೆಯೋ ನರಹರಿಯೆ
ಕಡುಕೋಪದಿಂ ಖಳನು
ಖಡುಗವನೆ ಪಿಡಿದು ನಿನ್ನೊಡೆಯನೆಲ್ಲಿಹನು ಎಂದು ನುಡಿಯೆ ॥
ದೃಢಭಕುತಿಯಲಿ ಶಿಶುವು ಬಿಡದೆ ನಿನ್ನನು ಭಜಿಸೇ ।
ಸಡಗರದಿ ಕಂಬದಿಂದೊಡೆದೆ ನರಹರಿಯೆ
ಯಮಸುತನ ರಾಣಿಗಕ್ಷಯವಸನವಿತ್ತೆ ।
ಸಮಯದಲಿ ಅಜಮಿಳನ ಪೊರೆದೆ ॥
ಸಮಯಾಸಮಯವುಂಟೆ ಭಕ್ತವತ್ಸಲ ನಿನಗೆ ।
ಕಮಲಾಕ್ಷ ಕಾಗಿನೆಲೆಯಾದಿ ಕೇಶವನೇ

# ಶ್ರೀ ಗುರು ಸ್ತೋತ್ರಂ

ಶ್ರೀಗುರು ಸದ್ಗುರು ಜೈ ಗುರುನಾಥ ಪ್ರಭೋ ಮಹದೇವ
ಜೈ ಗುರುದೇವ ಜೈ ಮಹದೇವ

ಬ್ರಹ್ಮಾ ವಿಷ್ಣು ಶಂಕರ ಸುರನರ ಮಂಗಳಪದ ಗಾವೇ ದೇವಾ ವ
ಪದಗಾವೇ ಖೇಲ ಅಪಾರ ಗಾವತ ಸಾರ ಭವ ಭಯ ಸಬ್ ಖ
ಜೈ ಗುರುದೇವ ಜೈ ಮಹದೇವ

ವೇದ ಪುರಾಣ ಬಖಾನತ ನಾಹೀ ಸದ್ಗುರು ತೋರಿ ಮಹಿಮಾ
ಪೂಜನಸೇ ಪೂಜ್ಯಬನೇ ಶ್ರೀ ಕೃಷ್ಣ ಹೇ ರಾಮ
ಜೈ ಗುರುದೇವ ಜೈ ಮಹದೇವ

ಜಡ್ ಸಟ್ ತೀರಥ ಫಿರ್ ಫಿರ್ ಮೂರಖ ಮೂರಖ ಥೆ ಜಗಮೇ
ಮೂಖರಥೇ ಜಗಮೇ ಗುಸುಮುಖಿ ಯಾ ಸುಖಶಾಶ್ವತಪಾವೆ ತೋ
ಪಗಮೇ, ಜೈ ಗುರುದೇವ ಜೈ ಮಹದೇವ

ಗುರೂ ಪರ್ ಮೇ, ಕಾಮ ಕ್ರೋಧ ಷಡ್ ವೈರೀ ಭಾಂದೇ ಪ್ರೇಮವ
ಟಕಾಕರುಮೇ ಜೈ ಗುರುದೇವ ಜೈ ಮಹದೇವ ೪
ಸಬ್ ಮತಕೇ ಜನಪದ ಕವಿತಾಸೇ ಗಾವತ ಹೈ ಶುಭನಾಂ ದೇವಾ
ಗಾವತ ಹೈ ಶುಭನಾಂ, ಜಾನೇನಹಿ ಗುರು ಅದ್ಭುತಲೀಲ ಪ್ರೇಮಪರಾ
ನಿಶ್ಕಾಮ್ ಜೈ ಗುರುದೇವ ಜೈ ಮಹದೇವ ೫
ವರ್ಣಾತೀತ ಸದ್ಗುರು ರಾಜಾ ವರ್ಣನಸೇ ತೂ ಫೂಲ್ ದೇವಾ ವರ್ಣನ
ಸೇ ತೂ ಫೂಲ್, ಬಹುತ ಉಪಾದಿ ಜಗದೋದ್ಧಾರಕೆ ಶೂಗುಣ
ವಿರಹಿತನೂರ್,ಜೈ ಗುರುದೇವ ಜೈ ಮಹದೇವ ೬
ಭೌತಿಕ ಅಧ್ಯಾತ್ಮಿಕ ಜನ ಪೂರಬ ಪಶ್ಚಿಮಸೇ ಆವೇ ದೇವಾ ಪೂರಬ
ಪಶ್ಚಿಮಸೇ ಆವೇ ರಾಮಕೃಷ್ಣಪ್ರಿಯದತ್ತನರೇಂದ್ರಕಿ ತೀರಥ ಗುಣಗಾವೇ
ಜೈ ಗುರುದೇವ ಜೈ ಮಹದೇವ ೭
ಹರಿಹರಸುರನರ ಇಹಪರಕಾ ತೂ ಪ್ರೇಮಪಿತಾಮಾತಾ, ದೇವಾ
ಪ್ರೇಮಪಿತಾಮಾತಾ, ಸೂರಜ್ ತಾರಾ ಭೈರೀ ಪ್ಯಾರಾ ರೂಪೇ ತೋರಾ।
ಜಗದೋದಾರಾ, ಜೈ ಗುರುದೇವ ಜೈ ಮಹದೇವ.

# ಭ ಜ ನೆ

ಹರಿಬೋಲ್ ಹರಿಬೋಲ್ ಹರಿಬೋಲ್ ಮುಕುಂದ ಮಾಧವ
ಗೋವಿಂದ ಬೋಲ್

ರಾಮಬೋಲ್ ರಾಮಬೋಲ್ ರಾಮಬೋಲ್ ಸೀತಾ ಸಮೇತ
ಶ್ರೀರಾಮಚಂದ್ರ ಬೋಲ್

ಕೃಷ್ಣಬೋಲ್ ಕೃಷ್ಣಬೋಲ್ ಕೃಷ್ಣಬೋಲ್ ರಾಧಾಸಮೇತ
ಶ್ರೀರಾಧಾಕೃಷ್ಣ ಬೋಲ್

ವಿಠಲ್‌ಬೋಲ್ ವಿಠಲ್‌ಬೋಲ್ ವಿಠಲ್ ವಿಠಲ್‌ಬೋಲ್
ರುಕುಮಾಯಿ ಸಮೇತ ಶ್ರೀಪಾಂಡುರಂಗ ಬೋಲ್

ಶಿವಬೋಲ್ ಶಿವಜೋಲ್ ಶಿವ ಶಿವಬೋಲ್ ಉಮಾಸಮೇತ
ಶ್ರೀ ಸಾಂಬಶಿವಬೋಲ್

ಸ್ಕಂದನ್‌ಬೋಲ್ ಸ್ಕಂದನ್‌ಬೋಲ್ ಸ್ಕಂದನ್ ಸ್ಕಂದನ್ ಬೋಲ್
ವಳ್ಳೀಸಮೇತ ಶ್ರೀ ಸುಬ್ರಹ್ಮಣ್ಯಂ ಬೋಲ್

ಬಾಬಾಬೋಲ್ ಬಾಬಾಬೋಲ್ ಶಿರಡೀ ನಿವಾಸ ಶ್ರೀ ಸಾಯಿಬಾಬ ಬೋಲ್

## ಎನ್ನ ನಾಲಗೆಯಲಿ

ಬಲಿಯ ಮನೆಗೆ ವಾಮನ ಬಂದಂತೆ ।
ಭಗೀರಥಗೆ ಶ್ರೀ ಗಂಗೆ ಬಂದಂತೆ ।
ಮುಚುಕುಂದನಿಗೆ ಶ್ರೀ ಮುಕುಂದ ಬಂದಂತೆ ।
ಗೋಪಿಯರಿಗೆ ಗೋವಿಂದ ಬಂದಂತೆ ।
ವಿದುರನ ಮನೆಗೆ ಶ್ರೀ ಕೃಷ್ಣನು ಬಂದಂತೆ ॥
ವಿಭೀಷಣನ ಮನೆಗೆ ಶ್ರೀ ರಾಮ ಬಂದಂತೆ ।
ನಿನ್ನ ನಾಮವು ಎನ್ನ ನಾಲಿಗೆಯಲಿ ಬಂದು ।
ನಾಥನ್ನ ನಿಂದಂತೆ ಶ್ರೀ ಪುರಂದರ ವಿಠಲಾ ।



ಓಂ ನ ಮ ಶ್ಶಿ ವಾ ಯ

ಮಂಗಳಂ ಓಂಕಾರ ಮಂಗಳಂ ಓಂ
ನಮಃ ಶಿವಾಯ ಮಂಗಳಂ
ಮಂಗಳಂ ನಕಾರ ಮಂಗಳಂ ನಾದ
ಬಿಂದುಕಳಾತೀತ ಗುರುವೆ ಮಂಗಳಂ
ಮಂಗಳಂ ಮಕಾರ ಮಂಗಳಂ ಮಹಾ
ದೇವ ತಾನಾಗಿರುವ ಗುರುವೆ ಮಂಗಳಂ
ಮಂಗಳಂ ಶಿಕಾರಮಂಗಳಂ ಸಿದ್ಧ ಬುದ್ಧ
ರೂಪನಾದ ಗುರುವೆ ಮಂಗಳಂ
ಮಂಗಳಂ ವಕಾರಮಂಗಳಂ ವಾದ
ಭೇದ ದೂರನಾದ ಗುರುವೆ ಮಂಗಳಂ
ಮಂಗಳಂ ಯಕಾರ ಮಂಗಳಂ
ಎಲ್ಲಾ ರೂಪು ತಾನಾಗಿರುವ ಗುರುವೆ ಮಂಗಳಂ

ಜಲದೊಳು ಮತ್ಸ್ಯಾವತಾರನಿಗೆ ।
ಕುಲಗಿರಿಯನೆ ಪೊತ್ತ ಕೂರ್ಮನಿಗೆ ಕೋರೆದಾಡೆಯಲಿ ಧರಣಿಯನು
ಎಳೆತಂದು
ಚಿಕ್ಕಮಗುವ ಕಾಯ್ದ ಮುದ್ದು ನರಸಿಂಹಗೆ । ಮಂಗಳಾ ।
ಜಯ ಮಂಗಳಾ ॥
ಭೂಮಿಯ ದಾನವ ಬೇಡಿದಗೆ ಆ ಮಹಾ ಅಸುರರ ಗೆಲಿದವಗೆ ।
ರಾಮ ಚಂದ್ರನೆಂಬೊ ಸ್ವಾಮಿ ಶ್ರೀ ರಾಘವಗೆ ।
ಸತ್ಯಭಾಮೆಯರಸ ಗೋಪಾಲ ಕೃಷ್ಣಗೆ ಮಂಗಳಾ । ಜಯ ಮಂಗಳಾ ॥
ಬೆತ್ತಲೆ ನಿಂತಿಹ ಬೌದ್ಧನಿಗೆ । ಉತ್ತಮ ಹಯವನೇರಿದ ಕಲ್ಕಿಗೆ ।
ಹತ್ತಾವತಾರದೊಳ್ ಭಕ್ತರ ಸಲಹುವ ।
ನಮ್ಮ ನಿತ್ಯೋತ್ಸವ ಪುರಂದರವಿಠಲಗೆ । ಮಂಗಳಾ । ಜಯ
ಮಂಗಳಾ ॥



ವರವೈಕುಂಠದಿ ಬಂದವಗೆ । ವರಗಿರಿಯಲಿ ಸಂಚರಿಸುವಗೆ ।
ವರಹದೇವರನು ಅನುಸರಿಸಿ । ಸ್ವಾಮಿ ಪುಷ್ಕರಣಿ ತೀರದಲಿ ।
ಇರುವವಗೆ । ಮಂಗಳಂ ಜಯ ಮಂಗಳಂ ೧

ಸರಸದಲಿ ಬೇಟೆಗೆ ಹೊರಟವಗೆ । ಸರಸಿಜಾಕ್ಷಿಯು ಕಂಡವಗೆ
ಮರುಳಾಟದಿ ತಾ ಪರವಶನಾಗುತ ।
ಕೊರವಿ ವೇಷವ ಧರಿಸಿದವಗೆ ಮಂಗಳಂ ಜಯಮಂಗಳಂ ೨

ಗಗನರಾಜನ ಪುರಕೆ ಪೋದವಗೆ । ಬಗೆ ಬಗೆ ನುಡಿಗಳ
ನುಡಿದವಗೆ ।
ಅಗವಾಸಿಗೆ । ನಿನ್ನ ಮಗಳನು ಕೊಡು ಎಂದು ।
ಗಗನರಾಜನ ಸತಿಗ್ಹೇಳಿದವಗೇ । ಮಂಗಳಂ ಜಯ ಮಂಗಳಂ ೩

ತನ್ನ ಕೆಲಸ ತಾ ಮಾಡಿದವಗೆ । ಇನ್ನೊಬ್ಬರ ಹೆಸರ್ಹೇಳುವಗೆ ।
ಮುನ್ನ ಮದುವೆ । ನಿಶ್ಚಯವಾಗಿರಲು ।
ತನ್ನ ಬಳಗ ಕರೆಸಿರುವವಗೆ । ಮಂಗಳಂ ಜಯ ಮಂಗಳಂ ೪

ಎತ್ತಿನಿಬ್ಬಣ ಹೊರಟವಗೆ | ನಿತ್ಯ ತೃಪ್ತನಾಗಿರುವವಗೆ ।
ಉತ್ತರಣಿಯ ವಾಗುರವನುಂಡು । ತೃಪ್ತನಾಗಿ ತೇಗಿರುವವಗೆ ।
ಮಂಗಳಂ ಜಯ ಮಂಗಳಂ ೫